Jñana  Loka
A Multi-Faceted, Multi-Language Monthly Magazine

# Table of Contents



**Title Page:**
**Flowers, Outskirts of Mysuru. Captured by Venkateshprasanna**

# Editorial

- Venkateshprasanna

Hello everyone, and welcome to the May 2020 issue of Jnana Loka. We got a little bit delayed, but here is the month's edition nonetheless. We have received very encouraging feedback for our last issue and we are extremely thankful to all our readers for that. We hope to continue to compile the upcoming editions too in a manner that generates similar reading interest among our readers.

In this edition, we conclude the Marathi essay on Chhatrapati Shivaji by **Sri Atul Nene**, by looking at the various aspects of his leadership qualities, continuing on from the previous edition.

We have a couple of great contributions by **Dr. Chandana Sri.** Her painting depicting the great debate that happened between Adi Shankaracharya and Mandana Mishra with Ubhayabharati as the adjudicator is accompanied with a short poem that I wrote about the same event. She has also expertly translated the delightful Kannada poem of Rashtrakavi Manjeshwara Govinda Pai, "**gilivindu**", to English.

We have a short story "Redemption" by **Ms. Rashmi Vinay** that you might find very close to your hearts especially if you are a Kannadiga. **Sri Arun Ranganath** has contributed a beautiful poem too, for this edition.

**Shivaprasad** describes the visit of the Chinese traveling historian Sung Yun to Karnataka! He also has his usual thought provoking piece in his Vicharalahari and the Quiz to go with it too.

Finally, there are a couple of other articles of my own. A poem translation - that of Bill Watterson of the Calvin and Hobbes fame. This is a poem that was featured as part of the Calvin and Hobbes comics, where little Calvin gets fed up of the daily routines set by his parents and teachers and wants to run away to Yukon! I also have an article on our leisurely childhood with power cuts and the related impacts.

Happy reading!

# ವಿಚಾರಲಹರಿ

- ಶಿವಪ್ರಸಾದ್

ಮೇ ತಿಂಗಳ ಜ್ಞಾನಲೋಕಕ್ಕೆ ಸ್ವಾಗತ. ನಮ್ಮ ಕಳೆದ ಸಂಚಿಕೆಗೆ ತಾವೆಲ್ಲ ನೀಡಿದ ಉತ್ತಮ ಪ್ರತಿಕ್ರಿಯೆ, ವಿಮರ್ಶೆ ಹಾಗೂ ಪ್ರೋತ್ಸಾಹಕ್ಕೆ ಧನ್ಯವಾದಗಳು. ತಮ್ಮೆಲ್ಲರ ಪ್ರೋತ್ಸಾಹ ಹೀಗೇ ಮುಂದುವರೆಯಬೇಕೆಂಬುದು ನಮ್ಮ ಆಶಯ.

ಈ ವಿಚಾರಲಹರಿಯಲ್ಲೂ ಒಂದು ಪ್ರಚಲಿತ ವಿಚಾರದ ಬಗ್ಗೆ ಚರ್ಚಿಸಬಯಸುತ್ತೇನೆ. ಭಗವದ್ಗೀತೆಯಲ್ಲಿ ಕೃಷ್ಣ ಹೇಳಿದ ಒಂದು ಸಂದೇಶ 'ಪರಿವರ್ತನೆ ಜಗದ ನಿಯಮ'. ಮನುಕುಲದ ಆರಂಭದಿಂದಲೂ ಮಾನವನ ಜೀವನ ಅನೇಕ ಪರಿವರ್ತನೆಗಳನ್ನು ಕಂಡಿವೆ ಹಾಗೂ ಕಾಣುತ್ತಲೇ ಇವೆ. ಅನೇಕ ಪರಿವರ್ತನೆಗಳು ನಮ್ಮ ಬಾಳಿನಲ್ಲೂ ಸಂಭವಿಸಿವೆ ಮತ್ತು ನಾವು ನಮಗರಿವಿಲ್ಲದಂತೆ ಅವುಗಳಿಗೆ ಹೊಂದಿಕೊಂಡು ಬಿಟ್ಟಿದ್ದೇವೆ.

ಈ ಪರಿವರ್ತನೆಗಳಿಗೆ ಮೂಲ ಕಾರಣಗಳೇನು? ಒಂದು ಚಿಕ್ಕ ಉದಾಹರಣೆ. 2015ರಲ್ಲಿ ನಾನು ಬ್ಯಾಂಕೊಂದರ ಉದ್ಯೋಗಿಯಾಗಿದ್ದೆ. ನಾನು ಕೆಲಸ ಮಾಡುತ್ತಿದ್ದ ಬ್ಯಾಂಕು ಮೊದಲ ಬಾರಿಗೆ 'ಸ್ಕ್ಯಾನ್ ಅಂಡ್ ಪೆ' ಎಂಬ ತಂತ್ರಜ್ಞಾನವನ್ನು ಪ್ರಾಯೋಗಿಕವಾಗಿ ಅನುಷ್ಠಾನಕ್ಕೆ ತಂದಿತ್ತು. ಈ ತಂತ್ರಜ್ಞಾನ ಡಿಜಿಟಲ್ ಬ್ಯಾಂಕಿಂಗ್ ವ್ಯವಹಾರಗಳ ರೂಪವನ್ನೇ ಬದಲಿಸಿಬಿಡುವ ಸಾಮರ್ಥ್ಯವನ್ನು ಹೊಂದಿತ್ತು. ಅಲ್ಲಿಯವರೆಗೂ ಡಿಜಿಟಲ್ ವ್ಯವಹಾರವೆಂದರೆ 2005ರಲ್ಲಿ ಜಾರಿಗೆ ಬಂದ RTGS ಮತ್ತು NEFT ಹಾಗೂ 2010ರಲ್ಲಿ ಜಾರಿಗೆ ಬಂದ IMPS ವ್ಯವಸ್ಥೆಗಳು. ಇವನ್ನು ಬ್ಯಾಂಕುಗಳ ಮುಖಾಂತರ ಅಥವಾ ಇಂಟರ್ನೆಟ್ ಬ್ಯಾಂಕಿಂಗ್ ಮುಖಾಂತರ ಮಾತ್ರ ನಡೆಸಬಹುದಿತ್ತು. ಆದರೆ ಜನಸಾಮಾನ್ಯರ ಮಟ್ಟದಲ್ಲಿ ಈ ವ್ಯವಹಾರಗಳು ನಡೆಯುತ್ತಿದ್ದುದು ಬಹಳ ಕಡಿಮೆ. ಆಗಿನ್ನೂ ಭೌತಿಕ ಹಣವೇ ಹೆಚ್ಚು ಚಾಲ್ತಿಯಲ್ಲಿತ್ತು. ನಾವು ಜಾರಿಗೆ ತರಲಿಚ್ಛಿಸಿದ್ದು ಮೊಬೈಲ್ ಫೋನ್ ಮೂಲಕ ನಡೆಸಬಹುದಾದ ಬ್ಯಾಂಕಿಂಗ್ ವ್ಯವಹಾರವಾಗಿತ್ತು. ಆ ತಂತ್ರಜ್ಞಾನವನ್ನು ನಾವು ನಮ್ಮ ಗ್ರಾಹಕರು ಬಳಸುವಂತೆ ಮಾಡಲು ಬಹಳಷ್ಟು ಪ್ರಯತ್ನ ನಡೆಸಿ ಒಂದು ಹಂತದಲ್ಲಿ ಹೆಚ್ಚು ಮನ್ನಣೆ ಸಿಗದಿದ್ದಾಗ ಹುಮ್ಮಸ್ಸು ಕಳೆದುಕೊಂಡು ಇದರ ಹಂಚಿಕೆಯ ಗತಿಯನ್ನು ನಿಧಾನಗೊಳಿಸಿದೆವು. ಅದೊಂದು ಉತ್ತಮ ತಂತ್ರಜ್ಞಾನವಾಗಿತ್ತು. ಬ್ಯಾಂಕಿನ 'ಮೊಬೈಲ್ ಅಪ್ಲಿಕೇಶನ್ನನ್ನು' ಮೊಬೈಲ್ ಫೋನಿನಲ್ಲಿ ಡೌನ್ಲೋಡ್ ಮಾಡಿ, ಆ 'ಅಪ್ಲಿಕೇಶನ್' ತೆರೆದು ಫೋನಿನ ಕ್ಯಾಮೆರದಿಂದ ಇನ್ನೊಬ್ಬ ಗ್ರಾಹಕರ ಮೊಬೈಲ್ ಫೋನಿನಲ್ಲಿರುವ 'ಅಪ್ಲಿಕೇಶನ್' ನಲ್ಲಿದ್ದ 'ಬಾರ್ ಕೋಡ್' ಸ್ಕ್ಯಾನ್ ಮಾಡಿದರೆ ಸಾಕು, ಹಣ ವರ್ಗಾವಣೆ ಆಗಿಹೋಗುತ್ತಿತ್ತು.



ಈ ತಂತ್ರಜ್ಞಾನ ಬಹಳಷ್ಟು ಪ್ರಯೋಜನಕಾರಿಯಾಗಿತ್ತು. ಭೌತಿಕ ಹಣದ ಹರಿವನ್ನು ನಿಲ್ಲಿಸಿ, ಕಪ್ಪು ಹಣ, ಭ್ರಷ್ಟಾಚಾರದಂತಹ ಎಷ್ಟೋ ಸಾಮಾಜಿಕ ಸಮಸ್ಯೆಗಳಿಗೆ ಒಂದು ಪರಿಹಾರದಂತಿತ್ತು.

ಆದರೆ ನಮ್ಮ ಬ್ಯಾಂಕು ಎಷ್ಟೇ ಪ್ರಯತ್ನಪಟ್ಟರೂ ಆ ಬದಲಾವಣೆಯನ್ನು ಆರಂಭದಲ್ಲಿ ನಮ್ಮ ಗ್ರಾಹಕರ ಮಟ್ಟದಲ್ಲಿ ಅನುಷ್ಠಾನಕ್ಕೆ ತರಲು ಸಾಧ್ಯವಾಗಲೇ ಇಲ್ಲ. ಈ ರೀತಿಯ ತಂತ್ರಜ್ಞಾನದ ಅವಶ್ಯಕತೆಯನ್ನು ಮನಗೊಂಡು ಭಾರತೀಯ ರಿಸರ್ವ ಬ್ಯಾಂಕಿನ ಅಂಗ ಸಂಸ್ಥೆಯಾದ ನ್ಯಾಷನಲ್ ಪೇಮೆಂಟ್ ಕಾರ್ಪೋರೇಶನ್ ಕೂಡ ಇಂತಹದ್ದೇ ಒಂದು ಯೋಜನೆಯನ್ನು ಬಹು ದೊಡ್ಡ ಉದ್ದೇಶದೊಂದಿಗೆ 2016ರ ಆರಂಭದಲ್ಲಿ ಜಾರಿಗೆ ತಂದಿತು. ಇದರ ಪ್ರಕಾರ ಒಂದು 'UPI ಮೊಬೈಲ್ ಅಪ್ಲಿಕೇಶನ್'ಗೆ ಗ್ರಾಹಕ ತನ್ನ ಯಾವುದೇ ಬ್ಯಾಂಕ್ ಖಾತೆಯನ್ನು ಜೋಡಣೆ ಮಾಡಿ ಅದರಿಂದ ಇನ್ನೊಂದು ಬ್ಯಾಂಕಿನ ಖಾತೆಗೆ ಹಣ ವರ್ಗಾವಣೆ ಮಾಡಬಹುದಿತ್ತು. ಇದನ್ನು 'UPI' ವ್ಯವಸ್ಥೆ ಎನ್ನುತ್ತಾರೆ. ಆಗ ಜನ ಎಷ್ಟೆಲ್ಲಾ ಸೌಲಭ್ಯಗಳಿದ್ದರೂ ಡಿಜಿಟಲ್ ವ್ಯವಹಾರಗಳಿಗೆ ತಮ್ಮದೇ ಆದ ಸಬೂಬು ಹೇಳಿ ಬೆನ್ನು ತೋರಿಸುತಿದ್ದುದ್ದೇ ಹೆಚ್ಚು.

2016 ನವೆಂಬರ್ ತಿಂಗಳಿನಲ್ಲಿ ಸಂಭವಿಸಿದ ಘಟನೆಯೊಂದು ಡಿಜಿಟಲ್ ವ್ಯವಹಾರದ ವ್ಯಾಪಕ ಬಳಕೆಗೆ ಮುನ್ನುಡಿ ಬರೆಯಿತು. ಅದೇ  ಹಣದ 'ಅನಾಣ್ಯೀಕರಣ' (Demonitization). 500 ಮತ್ತು 1000 ರೂಪಾಯಿ ನೋಟುಗಳ ಚಲಾವಣೆಯನ್ನು ರದ್ದು ಮಾಡಿದ್ದು ಡಿಜಿಟಲ್ ವ್ಯವಹಾರಗಳ ಹಾಗೂ ಹೆಚ್ಚಾಗಿ 'ಸ್ಕ್ಯಾನ್' ಅಂಡ್ 'ಪೆ' ವ್ಯವಹಾರಗಳ ವ್ಯಾಪಕ ಬಳಕೆಗೆ ದಾರಿ ಮಾಡಿಕೊಟ್ಟಿತು. ಈಗಿನ ಜನಪ್ರಿಯ 'ಪೆಟಿಎಂ' 'ಫೋನ್ ಪೇ', 'ಗೂಗಲ್ ಪೇ' ಮುಂತಾದವುಗಳ ಉಪಯೋಗ ಹೆಚ್ಚಾಗಿ 'ಸ್ಕ್ಯಾನ್' ಅಂಡ್ 'ಪೇ' ವ್ಯವಸ್ಥೆಯ ಮುಖಾಂತರವೇ ನಡೆಯುವುದು. ಹಣದ 'ಅನಾಣ್ಯೀಕರಣ', 'ಡಿಜಿಟಲ್ ವ್ಯವಹಾರ'ಗಳು ಇಡೀ ದೇಶದ ಹಳ್ಳಿ ಹಳ್ಳಿಗೂ ಲಗ್ಗೆ ಇಡಲು ಮುನ್ನುಡಿ ಬರೆಯಿತು. ಆಗ ಇದರ ಬಳಕೆಗೆ ಜನರ ಸಾಕ್ಷರತಾ ಪ್ರಮಾಣ, ಮಾಹಿತಿ ತಂತ್ರಜ್ಞಾನದಲ್ಲಿನ ತಿಳುವಳಿಕೆ ಯಾವುದೂ ಅಡ್ಡ ಬರಲಿಲ್ಲ. ಇದಕ್ಕೆಲ್ಲಾ ಕಾರಣವಾಗಿದ್ದೇ ಆಗ ಜನರಲ್ಲಿ ಸೃಷ್ಟಿಯಾದ 'ಅವಶ್ಯಕತೆ' ಹಾಗು 'ಅನಿವಾರ್ಯತೆ'. ಹಣದ ಚಲಾವಣೆ ನಿಂತಾಗ ಡಿಜಿಟಲ್ ವ್ಯವಹಾರದತ್ತ ಮುಖ ಮಾಡದೆ ಜನರ ಬಳಿ ಇನ್ನಾವ ದಾರಿಯೂ ಇರಲಿಲ್ಲ.

ಹೌದು, ಯಾವುದೇ ಪರಿವರ್ತನೆಗೆ ಕಾರಣವಾಗುವುದೇ  'ಅವಶ್ಯಕತೆ' ಮತ್ತು 'ಅನಿವಾರ್ಯತೆ'ಗಳು. ಇವೆರಡೂ ಇಲ್ಲದಿದ್ದರೆ ಯಾವುದೇ ತಂತ್ರಜ್ಞಾನ ಅಥವಾ ಬದಲಾವಣೆಗಳ ವ್ಯವಸ್ಥಿತ ಹರಡುವಿಕೆ ಸಾಧ್ಯವಾಗುವುದೇ ಇಲ್ಲ. ಹೊಸ ವ್ಯವಸ್ಥೆ ಒಮ್ಮೆ ಹರಡಿಬಿಟ್ಟರೆ ಸಾಕು. ಅವುಗಳು ಹಿಂದಿನ ವ್ಯವಸ್ಥೆಗಿಂತ ಉತ್ತಮವೆಂದು ನಮ್ಮಲ್ಲಿ ಹೊಕ್ಕಿಬಿಟ್ಟರೆ ಸಾಕು. ನಾವಾಗಿಯೇ ಹೊಸ ವ್ಯವಸ್ಥೆಗೆ ಹೊಂದಿಕೊಂಡು ಹಳೆಯದನ್ನು ಇತಿಹಾಸದ ಪುಟಗಳಿಗೆ ಸೇರಿಸಿಬಿಡುತ್ತೇವೆ. ಇದಕ್ಕೆ ಇನ್ನೊಂದು ಉದಾಹರಣೆ ಈಗ ಜನಪ್ರಿಯವಾಗುತ್ತಿರುವ 'ಆನ್ಲೈನ್ ಕ್ಲಾಸ್ ಗಳು, 'ಆನ್ಲೈನ್ ಮೀಟಿಂಗ್ ಗಳು', 'ವಿಡಿಯೋ ಕಾಲ್ ಗಳು' ಮುಂತಾದವು. ಇವೆಲ್ಲಾ ತಂತ್ರಜ್ಞಾನ ಮುಂಚೆಯೇ ಇತ್ತು, ಆದರೆ ಇವುಗಳನ್ನು ಬಳಸಲೇಬೇಕಾದ ಅವಶ್ಯಕತೆಯಾಗಲಿ ಅಥವಾ ಅನಿವಾರ್ಯತೆ ಯಾಗಲಿ ಇರಲಿಲ್ಲ. ಮುಂದೆ ಯಾವಾಗಲೋ ಈ ಬದಲಾವಣೆಗಳು ಬರಬಹುದೆಂದು ಮಾತಾಡುತ್ತಿದ್ದ ನಾವು ಆ ಮುಂದಿನ ದಿನ ಇಂದೇ ಬಂದಿದೆ ಎಂದು ಅರಿತುಕೊಂಡು ಬದಲಾಗಲು ಹೆಚ್ಚು ಸಮಯ ಬೇಕಾಗಿಲ್ಲ. ಇಂದು ನಮಗೇ ಗೊತ್ತಿಲ್ಲದಂತೆ ಬದಲಾವಣೆಗಳು ಕಾಲಿಟ್ಟಿವೆ. ನಾವು ಒಂದು ಹೊಸ ಕಾಲಘಟ್ಟದ ಆರಂಭದಲ್ಲಿದ್ದೇವೆ.

**ಡಿಜಿಟಲ್ ಯುಗಕ್ಕೆ ಸ್ವಾಗತ.**

# ಚಿತ್ರ-ಕಾವ್ಯ: "ವಾದ"

- ಚಿತ್ರ: ಡಾ || ಚಂದನಶ್ರೀ;
- ಕಾವ್ಯ: ವೆಂಕಟೇಶಪ್ರಸನ್ನ

ದುಂಡನೆ ಮೋರೆಯ ಸುಂದರ ತರುಣ ಕ-
ಮಂಡಲಧರನಿವ ಯತಿರಾಯ,
ದಂಡವ ಹಿಡಿಯುತ ಖಂಡವನಲೆಯುತ
ಕಂಡಿಹನಾತ್ಮದ ಪರಮಾರ್ಥ! || 1 ||

ಮಂಡನ ಮಿಶ್ರರ ಖಂಡಿತ ವಾದಕೆ
ಮಂಡಿಸಿ ತನ್ನಯ ಪ್ರತಿವಾದ
ಖಂಡವನರಿಯದ ಕಾಲದ ಗತಿಯೊಳು
ಪಂಡಿತರಾಜನಿಗೆದುರಾದ. || 2 ||

ಕುಂಡಲವದುರಿತು ಚಂಡಿಕೆ ಬಸಿಯಿತು
ಬಂಡೆಯ ಪಟ್ಟದು ಸಡಿಲಿಸಿತು,
ಗುಂಡಿಗೆಯೊಳಗಿನ ಕೆಂಡವು ಕಾದಿರೆ
ದಂಡೆಯು ಬಾಡಿತು ಮಿಶ್ರರದು! || 3 ||

ಗಂಡನ ಪಕ್ಷಕೆ ಭೇದವ ತೋರದೆ
ಖಂಡಿತಳಾದಳು ಭಾರತಿಯು,
ಚಂಡಕಿರಣ ಶ್ರೀ ಶಂಕರ ವಿಜಯದಿ
ವಂದಿತವಾಯಿತು ಭಾರತವು! || 4 ||

# ‘ಸುಂಗ್ ಯುನ್’ನ ಕರ್ನಾಟಕ ಪ್ರವಾಸ

**- ಶಿವಪ್ರಸಾದ್**

**ಕ್ರಿಸ್ತ ಶಕ 2080, ಚೀನಾದ ಪ್ರಖ್ಯಾತ ಪ್ರವಾಸಿ ಇತಿಹಾಸಕಾರ 'ಸುಂಗ್ ಯುನ್' ಭಾರತದ ಅತ್ಯಂತ ಸಂಪದ್ಭರಿತ ರಾಜ್ಯವಾದ ಕರ್ನಾಟಕದ ಪ್ರವಾಸಕ್ಕೆ ಬಂದಿದ್ದ. ಕರ್ನಾಟಕವ್ರೋ, ಭಾರತದ ಅತ್ಯಂತ ಮುಂದುವರಿದ ರಾಜ್ಯವಾಗಿತ್ತು. ಉತ್ತಮ ಅರ್ಥ ವ್ಯವಸ್ಥೆ, ಪಾರದರ್ಶಕ ಆಡಳಿತ, ಪ್ರಾದೇಶಿಕ ಸಮತೋಲನ, ಉತ್ತಮ ಜೀವನದ ಗುಣಮಟ್ಟ ಹೊಂದಿದ್ದ ಕರ್ನಾಟಕದ ಜನರೆಲ್ಲಾ ಸುಖ ಸಂತೋಷದಿಂದ ಜೀವನ ನಡೆಸುತ್ತಿದ್ದರು. ಕರ್ನಾಟಕ ಹೇಗೆ ಈ ರೀತಿಯ ಅಭಿವೃದ್ಧಿ ಹೊಂದಿತು ಎಂಬುದರ ಬಗ್ಗೆ ತಿಳಿದು ತನ್ನ 'ರಿಸರ್ಚ್ ಪೇಪರ್' ನಲ್ಲಿ ಪ್ರಕಟಿಸುವುದೇ 'ಸುಂಗ್ ಯುನ್' ನ ಪ್ರವಾಸದ ಉದ್ದೇಶವಾಗಿತ್ತು.**

**ಬೆಳಗಾವಿಯ ವಿಮಾನ ನಿಲ್ದಾಣಕ್ಕೆ ಬಂದಿಳಿದ 'ಸುಂಗ್ ಯುನ್' ರಾಜ್ಯದಲ್ಲೆಡೆ ಕೆಲ ದಿನ ಸುತ್ತಾಡಿ ನಂತರ ಬೆಂಗಳೂರಿಗೆ ಬಂದನು. ಯಾವುದಾದರೂ ನಿಖರವಾದ ಮೂಲದಿಂದ ನವಕರ್ನಾಟಕದ ಇತಿಹಾಸದ ಬಗ್ಗೆ ತಿಳಿದುಕೊಳ್ಳಬೇಕೆಂದು ನಿರ್ಧರಿಸಿ ಆಗಿನ ಪ್ರಮುಖ ಇ-ಪತ್ರಿಕೆಯಾದ ಜ್ಞಾನಲೋಕದ ಸಂಪಾದಕರನ್ನು ಭೇಟಿಯಾಗಿ ತನ್ನ ಹಲವಾರು ಪ್ರಶ್ನೆಗಳನ್ನು ಮುಂದಿಟ್ಟನು.**

**ಸುಂಗ್ ಯುನ್: ಸಂಪಾದಕರೇ, ತಮಗೆ ನಮಸ್ಕಾರ. ಕೆಲವು ದಿನಗಳಿಂದ ನಾನು ಕರ್ನಾಟಕದ ಪ್ರವಾಸದಲ್ಲಿದ್ದೇನೆ. ಇಲ್ಲಿನ ಸ್ವಚ್ಛ ಪರಿಸರ, ಉತ್ತಮ ಜನಜೀವನ, ಅಭಿವೃದ್ಧಿ ನನಗೆ ಅಚ್ಚರಿ ಉಂಟು ಮಾಡಿದೆ. ಭಾರತದ ಯಾವ ರಾಜ್ಯಗಳಲ್ಲೂ ಈ ರೀತಿಯ ಅಭಿವೃದ್ಧಿಯನ್ನು ನಾನು ಕಾಣಲಿಲ್ಲ. ಪ್ರಜಾಪ್ರಭುತ್ವ ವ್ಯವಸ್ಥೆಯುಳ್ಳ ರಾಜ್ಯವೊಂದರಲ್ಲಿ ಈ ರೀತಿಯ ಬೆಳವಣಿಗೆ ಹೇಗೆ ಸಾಧ್ಯವಾಯಿತು?**

**ಸಂಪಾದಕರು: ಸ್ವಾಮಿ, ತಮಗೆ ನಮ್ಮ ಕನ್ನಡ ನಾಡಿಗೆ ಸ್ವಾಗತ. ತಾವು ನಮ್ಮ ನಾಡಿನ ಬಗ್ಗೆ ಅಧ್ಯಯನ ನಡೆಸಲು ಇಚ್ಚಿಸಿ ಅಷ್ಟು ದೂರದಿಂದ ಬಂದಿದ್ದೀರೆಂದು ತಿಳಿದು ಸಂತೋಷ ಉಂಟಾಯಿತು. ನಿಮ್ಮ ಉದ್ದೇಶವನ್ನು ನೋಡಿ ನನಗೆ ನಮ್ಮ ನಾಡಿನ ಹಿರಿಮೆಯ ಬಗ್ಗೆ ಹೆಮ್ಮೆಯುಂಟಾಗುತ್ತದೆ. ಈ ಅಭಿವೃದ್ಧಿ ಪರ್ವ ಸುಮಾರು 2022-23ರಲ್ಲಿ ಪ್ರಾರಂಭವಾಯಿತು. ತಾವು ಓದಿರಬಹುದು. 2020ರಲ್ಲಿ ನಮ್ಮ ದೇಶದಲ್ಲೆಲ್ಲ ನಿಮ್ಮ ದೇಶದಿಂದ ಬಂದ ವೈರಸ್ ಒಂದು ಹರಡಿ ನಮ್ಮ ಆರ್ಥಿಕ ಹಾಗು ಸಾಮಾಜಿಕ ವ್ಯವಸ್ಥೆಯನ್ನೇ ಬುಡಮೇಲು ಮಾಡಿತ್ತು. ಆಗ ನಾವು ಅಭಿವೃದ್ಧಿ ಹೊಂದುತ್ತಿದ್ದ ರಾಜ್ಯವಾಗಿದ್ದೆವು. ಆ ಕಾಲಘಟ್ಟದಲ್ಲಿ ನಮ್ಮಲ್ಲಿ ಬಡತನ, ನಿರುದ್ಯೋಗ, ಭ್ರಷ್ಟಾಚಾರದಂತಹ ಜ್ವಲಂತ ಸಮಸ್ಯೆಗಳಿದ್ದವು. ನಮ್ಮ ರಾಜಧಾನಿ ಬೆಂಗಳೂರು ಮಾತ್ರ, ಆಗ ಬೃಹದಾಕಾರವಾಗಿ ಬೆಳೆಯುತ್ತಾ ರಾಜ್ಯದ ಹಾಗು ರಾಷ್ಟ್ರದ ನಾನಾ ಭಾಗದ ಜನರಿಗೆ ಆಶ್ರಯವಾಗಿತ್ತು. ಆ ವೈರಸ್ ಬಹಳ ವೇಗವಾಗಿ ಜನದಿಂದ ಜನರಿಗೆ ಹರಡುತ್ತಿದ್ದರಿಂದ ನಮ್ಮ ಎಲ್ಲ ಆರ್ಥಿಕ ಚಟುವಟಿಕೆಗಳು ಕೆಲವು ದಿನ ನಿಂತು ಹೋಗಿದ್ದವು.**

ರಾಜಧಾನಿಯಲ್ಲಿ ಚಟುವಟಿಕೆಗಳು ನಿಂತಮೇಲೆ ಇಲ್ಲಿಗೆ ಕೆಲಸಕ್ಕೆಂದು ವಲಸೆ ಬಂದಿದ್ದ ಹಲವಾರು ಮಂದಿ ತಮ್ಮ ಊರುಗಳಿಗೆ ವಾಪಸ್ಸಾಗಿಬಿಟ್ಟರು. ಇಲ್ಲಿನ ಅನೇಕ ಆರ್ಥಿಕ ಚಟುವಟಿಕೆಗಳು ಕಾರ್ಮಿಕರಿಲ್ಲದೆ ನಿಂತು ಹೋದವು. ಸರ್ಕಾರ ಇಲ್ಲಿಂದ ವಾಪಸ್ಸು ಹೋದವರಿಗೆ ಕೆಲವು ದಿನಗಳ ಕಾಲ ಸ್ವಲ್ಪ ಹಣಕಾಸು ಸಹಾಯ ನೀಡಿತು. ಆದರೆ ಇದು ಬಹಳ ದಿನ ಸಾಧ್ಯವಾಗಲಿಲ್ಲ. ಕೆಲವು ದಿನಗಳ ನಂತರ ಬೆಂಗಳೂರಿನಿಂದ ವಾಪಸ್ಸಾದವರು ತಮ್ಮ ಊರುಗಳಲ್ಲಿ ಏನೂ ಕೆಲಸವಿಲ್ಲದೆ, ಕೈಯಲ್ಲಿ ಹಣವಿಲ್ಲದೆ ಕಂಗಾಲಾಗಿ ಹೋಗಿದ್ದರು.

ಸುಂಗ್ ಯುನ್: ಒಹೋ, ಹಾಗಾದರೆ ಇವರನ್ನು ಸರಕಾರ ತಕ್ಷಣ ವಾಪಸ್ಸು ಕರೆಸಿರಬೇಕು.

ಸಂಪಾದಕರು: ಅದೊಂದು ದೊಡ್ಡ ಕಥೆ. ನಮ್ಮಲ್ಲಿ ವೈರಸ್ ಹರಡಲು ಶುರುವಾದ ಕೆಲ ದಿನಗಳ ಕಾಲ ಲಾಕ್ ಡೌನ್ ಮಾಡಿದ್ದೆವು. ನಂತರ ಆರ್ಥಿಕ ಹಿಂಜರಿಕೆ ಶುರುವಾದಾಗ ವೈರಸ್ ಜೊತೆಗೇ ಹೊಂದಿಕೊಂಡು ಬದುಕೋಣ ಎಂದು ನಿರ್ಧರಿಸಿ ಎಲ್ಲ ವ್ಯವಸ್ಥೆಗಳನ್ನು ಪುನಃ ತೆರೆದೆವು. ಅಷ್ಟರಲ್ಲೇ ಬಹುತೇಕರು ತಮ್ಮ ಊರುಗಳಿಗೆ ಹೊರಟುಹೋಗಿದ್ದರು. ವ್ಯವಸ್ಥೆಗಳು ತೆರೆದ ಮೇಲೆ ತಮ್ಮ ಊರುಗಳಲ್ಲಿ ಕೆಲಸವಿಲ್ಲದೇ ಅನೇಕರು ಇಲ್ಲಿಗೇ ವಾಪಸ್ಸು ಬರಲು ನಿರ್ಧರಿಸಿದರು. ಸರ್ಕಾರವೇನೋ ಜನ ತಮ್ಮಷ್ಟಕ್ಕೆ ತಿಳಿದುಕೊಂಡು, ಸಂರಕ್ಷಣಾ ಕ್ರಮಗಳನ್ನು ತೆಗೆದುಕೊಂಡು ಸೋಂಕಿನಿಂದ ತಪ್ಪಿಸಿಕೊಂಡುಬಿಡುತ್ತಾರೆ ಎಂದು ಭಾವಿಸಿ ಲಾಕ್ ಡೌನ್ ಅನ್ನು ರದ್ದು ಪಡಿಸಿತ್ತು. ಆದರೆ ಆಗಿದ್ದೇ ಬೇರೆ. ಜನ ಮತ್ತೆ ತಿರುಗಾಡಲು ಪ್ರಾರಂಭಿಸಿದ ನಂತರ ಆ ವೈರಸ್ ವ್ಯಾಪಕವಾಗಿ ಹಬ್ಬಿ ಜನರ ಆರೋಗ್ಯವನ್ನು ಹದಗೆಡಿಸಲು ಶುರು ಮಾಡಿತು. ಆಗ ಇಲ್ಲಿಗೆ ಮತ್ತೆ ಮರಳಲು ಕಾಯುತ್ತಿದ್ದ ಜನ ಹೆದರಿ ತಮ್ಮ ಊರುಗಳಲ್ಲೇ ಉಳಿದರು. ತಮ್ಮ ಊರುಗಳಲ್ಲಿ ಏನೂ ಕೆಲಸವಿಲ್ಲದೇ ಅವರ ಆರ್ಥಿಕ ಪರಿಸ್ಥಿತಿ ಕ್ಷೀಣಿಸಿತು. ಇದೇ ಸಮಯದಲ್ಲಿ ಗಂಭೀರವಾದ ಆರ್ಥಿಕ ಹಿಂಜರಿತ ಕೂಡ ಸಂಭವಿಸಿತು. ಇಡೀ ವ್ಯವಸ್ಥೆಯೇ ಇದರಿಂದ ಕಂಗಾಲಾಗಿತ್ತು. ರಾಜಕಾರಣಿಗಳು ಕೂಡ ಹೆದರಿ ಅಡಗಿ ಕುಳಿತುಬಿಟ್ಟಿದ್ದರು.

ಸುಂಗ್ ಯುನ್: ಒಹೋ, ಹಾಗೋ? ಈ ರೀತಿಯ ಸನ್ನಿವೇಶಗಳಿಂದ ಬಹಳ ಜಟಿಲ ಪರಿಸ್ಥಿತಿ ಉದ್ಭವಿಸುತ್ತದೆ. ಆಮೇಲೆ ಹೇಗೆ ನೀವೆಲ್ಲಾ ಈ ಪರಿಸ್ಥಿತಿಯಿಂದ ಹೊರಬಂದಿರಿ?

ಸಂಪಾದಕರು: ವೈರಸ್ ಹಾಗು ಆರ್ಥಿಕ ಹಿಂಜರಿತದಿಂದ ಕಂಗೆಟ್ಟ ಸರಕಾರ ರಾಜ್ಯದ ಎಲ್ಲಾ ಪ್ರದೇಶಗಳ ಮೂಲ ಅಭಿವೃದ್ಧಿಗೆ ಒತ್ತು ಕೊಡಲು ನಿರ್ಧರಿಸಿತು. ಇಲ್ಲಿಂದ ವಾಪಸ್ಸು ಹೋದವರಿಗೆ ತಮ್ಮದೇ ಪ್ರದೇಶಗಳಲ್ಲಿ ಉದ್ಯೋಗ ಕಲ್ಪಿಸಿಕೊಂಡುವ ಒಂದು ವ್ಯವಸ್ಥೆಯನ್ನು ನಿರ್ಮಾಣ ಮಾಡಲು ಬಯಸಿತು. ಮುಂದಿನ ಹತ್ತು ವರ್ಷಗಳ ಕಾಲ ಚುನಾವಣೆ ನಡೆಸದಿರಲು ನಿರ್ಧರಿಸಿತು. ಯಾರು ತಮ್ಮ ಸ್ವಯಂ ಆಸಕ್ತಿಯಿಂದ ದುಡಿಯಲಿಚ್ಛಿಸುತ್ತಾರೋ ಅವರುಗಳಿಗೆ ಆಡಳಿತದ ಚುಕ್ಕಾಣಿ ಹಿಡಿಯಲು ಅವಕಾಶ ನೀಡಿತು. ಆರ್ಥಿಕ ಹಿಂಜರಿತದಿಂದ ಸರಕಾರದ ಬೊಕ್ಕಸ ಖಾಲಿಯಾಗಿ ಹೋಗಿತ್ತು. ದೇಶದ ಹಾಗು ರಾಜ್ಯದ ಎಲ್ಲ ಉದ್ಯಮಗಳು ನಷ್ಟದಲ್ಲಿದ್ದವು.

ಈ ಸಂದರ್ಭದಲ್ಲಿ ತಮ್ಮ ಸ್ವಂತ ಲಾಭಗಳು ಈಡೇರುವುದಿಲ್ಲ ಎಂಬ ಕಾರಣದಿಂದ ಬಹುತೇಕ ರಾಜಕಾರಣಿಗಳು ರಾಜಕೀಯದಿಂದ ಹಿಂದುಳಿದರು. ಈ ಸಮಯದಲ್ಲಿ ನೋಡಿ ಆಗಿನ ಮುಖ್ಯಮಂತ್ರಿ, ಜಗಳೂರಪ್ಪನವರು ತಮ್ಮೊಂದಿಗೆ ಪಕ್ಷಬೇಧವನ್ನೂ ಮರೆತು ಸ್ವಂತ ಇಚ್ಛೆಯಿಂದ ತಮ್ಮೊಂದಿಗೆ ಸೇರಿದ ಕೆಲವೊಂದು ಪ್ರಾಮಾಣಿಕ ರಾಜಕಾರಣಿಗಳೊಂದಿಗೆ ಕಾರ್ಯಪ್ರವೃತ್ತರಾದರು. ಆಗ ಎಲ್ಲೆಡೆ ಅರಾಜಕತೆ ಉಂಟಾಗಿತ್ತು. ನಿರುದ್ಯೋಗ ಎದ್ದು ಕಾಣುತ್ತಿತ್ತು. ಜನಗಳ ಜೀವನ ಮಟ್ಟ ಕುಸಿದಿತ್ತು. ಈ ಸಂದರ್ಭದಲ್ಲಿ ಜಗಳೂರಪ್ಪನವರು ಆರ್ಥಿಕ ಚಟುವಟಿಕೆಗಳ ವಿಕೇಂದ್ರೀಕರಣಕ್ಕೆ ಮುನ್ನುಡಿ ಇಟ್ಟರು.

ಸುಂಗ್ ಯುನ್: ಹಾಗೆಂದರೇನು? ನಾನು ಕೇಂದ್ರೀಕರಣದ ಬಗ್ಗೆ, ಎಂದರೆ ಎಲ್ಲ ಚಟುವಟಿಕೆಗಳು, ಉದಾಹರಣೆಗೆ ಕೈಗಾರಿಕೆಗಳು, ಮಾಹಿತಿ ಹಾಗು ಜೈವಿಕ ತಂತ್ರಜ್ಞಾನದ ಕಾರ್ಯ ಚಟುವಟಿಕೆಗಳನ್ನೂ ಒಂದು ನಗರಕ್ಕೆ ಕೇಂದ್ರೀಕರಿಸಿ ಆ ನಗರದಲ್ಲಿ ಎಲ್ಲ ಮೂಲಭೂತ ಸೌಕರ್ಯವನ್ನು ಒದಗಿಸುವುದರಿಂದ ಅಭಿವೃದ್ಧಿ ಹೊಂದಬಹುದು ಎಂದು ಕೇಳಿದ್ದೆ. ಆದರೆ ಇಲ್ಲಿ ತಾವು ವಿಕೇಂದ್ರೀಕರಣದಿಂದ ಅಭಿವೃದ್ಧಿ ಸಾಧಿಸಿದಿರೆಂದು ಹೇಳುತ್ತಿದ್ದೀರಿ. ನನಗ ಸ್ವಲ್ಪ ವಿವರವಾಗಿ ಹೇಳಿ ?

ಸಂಪಾದಕರು: ನೋಡಿ ಸುಂಗ್ ಯುನ್, ನಿಮಗೆ ಇಲ್ಲಿನ ಮುಂಚಿನ ವ್ಯವಸ್ಥೆಯ ಬಗ್ಗೆ ಸ್ವಲ್ಪ ತಿಳಿಸಬೇಕು. ಕರ್ನಾಟಕದಲ್ಲಿ ೩೦ ಜಿಲ್ಲೆಗಳಿವೆ. ಮೊದಲು ಬೆಂಗಳೂರು ಮಾತ್ರ ಹೆಚ್ಚು ಅಭಿವೃದ್ಧಿ ಹೊಂದಿತ್ತು. ಕೈಗಾರಿಕೆಗಳು, ಉದ್ಯೋಗಾವಕಾಶಗಳು, ಮಾಹಿತಿ ಹಾಗು ಜೈವಿಕ ತಂತ್ರಜ್ಞಾನ, ಉತ್ತಮ ವಿದ್ಯಾಭ್ಯಾಸ ಮುಂತಾದವುಗಳು ಬಹುತೇಕ ಇಲ್ಲಿಗೆ ಮಾತ್ರ ಸೀಮಿತವಾಗಿತ್ತು. ಇತರ ಬಹುತೇಕ ಪ್ರದೇಶಗಳು ಆರ್ಥಿಕ ಚಟುವಟಿಕೆಗಳ ಕೊರತೆಯಿಂದ ಹಿಂದುಳಿದಿದ್ದವು. ಹಿಂದುಳಿದ ಪ್ರದೇಶಗಳ ರಾಜಕಾರಣಿಗಳು ಹಾಗು ಮುಖಂಡರು ತಮ್ಮ ಸ್ವಾರ್ಥ ಸಾಧನೆಗಾಗಿ ಆ ಪ್ರದೇಶಗಳ ಬೆಳವಣಿಗೆಗೆ ಬೆಂಬಲ ನೀಡುತ್ತಿರದಿದ್ದುದೂ ಇದಕ್ಕೆ ಮತ್ತೊಂದು ಕಾರಣವಾಗಿತ್ತು. ಈ ಕಾರಣಕ್ಕೆ ಬೆಂಗಳೂರಿಗೆ ಅವಕಾಶಗಳನ್ನು ಅರಸಿ ಜನ ವಲಸೆ ಬರುತ್ತಿದ್ದರು. ತಮ್ಮಲ್ಲೇ ವಿಪುಲ ಅವಕಾಶಗಳಿದ್ದರೆ ಹುಟ್ಟಿದ ಊರನ್ನು ಬಿಟ್ಟು ಯಾರು ಬರುತ್ತಾರೆ ಹೇಳಿ? ಈ ಕಾರಣದಿಂದ ಬೆಂಗಳೂರಿನಲ್ಲಿ ಜನಸಂಖ್ಯೆ ಹೆಚ್ಚಾಗಿ ಟ್ರಾಫಿಕ್ ಸಮಸ್ಯೆ, ಪರಿಸರ ಮಾಲಿನ್ಯದಂತಹ ಹಲವಾರು ಸಮಸ್ಯೆಗಳು ಉದ್ಭವವಾಗಿದ್ದವು. ಅದು ಎಷ್ಟು ಉಲ್ಬಣವಾಗಿತ್ತೆಂದರೆ ಆ ಕಿಟಕಿಯ ಹಿಂದೆ ಒಂದು ನಿರ್ಮಲವಾದ ನದಿ ಹರಿಯುತ್ತಿರುವುದು ನಿಮಗೆ ಕಾಣುತ್ತಿದೆಯಲ್ಲಾ, ಅದು ಆ ಕಾಲದ ದೊಡ್ಡ ಚರಂಡಿಯಾಗಿತ್ತು.

ಸುಂಗ್ ಯುನ್: ಒಹೋ! ನಾನು ಆ ನದಿಯಲ್ಲಿ ನಿನ್ನೆ ಬೋಟಿಂಗ್ ಮಾಡಿದೆ. ತಿಳಿಯಾದ ನೀರು. ನನಗೆ ಬಹಳ ಮುದ ನೀಡಿತು. ಈ ಪರಿವರ್ತನೆ ಹೇಗಾಯಿತು?ಸುಂಗ್ ಯುನ್: ಒಹೋ . ನಾನು ಆ ನದಿಯಲ್ಲಿ ನಿನ್ನೆ ಬೋಟಿಂಗ್ ಮಾಡಿದೆ. ತಿಳಿಯಾದ ನೀರು. ನನಗೆ ಬಹಳ ಮುದ ನೀಡಿತು. ಈ ಪರಿವರ್ತನೆ ಹೇಗಾಯಿತು?

# ಜ್ಞಾನ  ಲೋಕ

ಸಂಪಾದಕರು: ಜಗಳೂರಪ್ಪನವರು ಒಂದು ಹೊಸ ಆರ್ಥಿಕ ನೀತಿ ರೂಪಿಸಿ ಅದನ್ನು ಕಾರ್ಯರೂಪಕ್ಕೆ ತಂದರು. ಇಲ್ಲಿನ ಬಹುತೇಕ ಉತ್ಪಾದನಾ, ಮಾಹಿತಿ ಹಾಗು ಜೈವಿಕ ತಂತ್ರಜ್ಞಾನದ ಘಟಕಗಳನ್ನು ಬೆಂಗಳೂರಿನಿಂದ ಹೊರಗೊಯ್ಯಲು ನಿರ್ಧರಿಸಲಾಯಿತು. ಬೆಂಗಳೂರಿನಿಂದ ಹೊರನಡೆಯಲು ಇಚ್ಚಿಸದ ಘಟಕಗಳಿಗೆ ತಮ್ಮ ವಹಿವಾಟಿನ ೩೦%ನ್ನು ತೆರಿಗೆಯಾಗಿ ಪಾವತಿ ಮಾಡಲು ಸೂಚಿಸಲಾಯಿತು. ಇಲ್ಲಿಂದ ಹೊರಹೋಗಲಿಚ್ಚಿಸಿದ ಘಟಕಗಳಿಗೆ ರಾಜ್ಯದ ಇತರೆ ಸ್ಥಳಗಳಲ್ಲಿ ಉಚಿತ ಭೂಮಿ, ತೆರಿಗೆ ವಿನಾಯಿತಿಯಂತಹ ಅನೇಕ ಸೌಲಭ್ಯಗಳನ್ನು ನೀಡಲಾಯಿತು. ಈ ಯೋಜನೆಯಡಿ ಹೊರಹೋಗಲು ನಿರ್ಧರಿಸಿದ ಘಟಕಗಳ ಪಟ್ಟಿ ತಯಾರಿಸಿ ಯಾವ ಸ್ಥಳಗಳಲ್ಲಿ ಇವುಗಳನ್ನು ಸ್ಥಳಾಂತರಿಸಬೇಕು ಎಂಬುದನ್ನು ಸರಕಾರವೇ ನಿರ್ಧರಿಸಿ ಉದ್ದಿಮೆಗಳನ್ನು ಎಲ್ಲ ಜಿಲ್ಲೆಗಳಿಗೂ ಆ ಪ್ರದೇಶದ ಭೌಗೋಳಿಕ ಸನ್ನಿವೇಶಗಳಿಗನುಗುಣವಾಗಿ ವೈಜ್ಞಾನಿಕವಾಗಿ ಹಂಚಿಕೆ ಮಾಡಿತು. ಹೊಸ ಸ್ಥಳಗಳಿಗೆ ಈ ಉದ್ದಿಮೆಗಳನ್ನು ಹಂತ ಹಂತವಾಗಿ ವರ್ಗಾವಣೆ ಮಾಡಲು ಸಮಯ ನೀಡಲಾಯಿತು. ಇದರ ಸಂಪೂರ್ಣ ಮೇಲ್ವಿಚಾರಣೆಯನ್ನು ಸರಕಾರವೇ ವಹಿಸಿಕೊಂಡು ವ್ಯವಸ್ಥಿತವಾಗಿ ನಿರ್ವಹಿಸಿತು. ಹೊಸದಾಗಿ ಕಟ್ಟಿದ ಎಲ್ಲಾ ಉತ್ಪಾದನಾ ಅಥವಾ ಸೇವಾ ಉದ್ಯಮಗಳಲ್ಲಿ ಮೊದಲ ದಿನದಿಂದಲೇ ನೀರು ಶುದ್ದೀಕರಣ, ಸೌರ ವಿದ್ಯುತ್ ಫಲಕಗಳು, ಮಳೆ ನೀರಿನ ಕೊಯ್ಲು, ಸಮುದಾಯ ಅರಣ್ಯಗಳ ಅಭಿವೃದ್ಧಿ ಮುಂತಾದವುಗಳು ಕಡ್ಡಾಯವಾದವು. ಇದರ ಸಂಪೂರ್ಣ ಅನುಷ್ಠಾನವನ್ನು ಸರ್ಕಾರ ಖಚಿತಪಡಿಸಿಕೊಂಡಿತು. ಕೇವಲ ೫-೬ ವರ್ಷಗಳಲ್ಲಿ ವಾಣಿಜ್ಯ ಚಟುವಟಿಕೆಗಳು ರಾಜ್ಯದ ಎಲ್ಲಾ ಭಾಗಗಳಿಗೂ ಹಂಚಲ್ಪಟ್ಟವು. ಹೀಗೆ ಬೆಂಗಳೂರಿನಲ್ಲಿ ಜನಸಂಖ್ಯೆ ಹಾಗು ಕೈಗಾರಿಕೆಗಳು ಕಡಿಮೆಯಾದವು. ಇದರಿಂದ ಈ ನದಿಗೆ ಕಲುಷಿತ ನೀರು ಹರಿಯುವುದು ನಿಂತು ನದಿ ಸ್ವಚ್ಛಂದವಾಗಿ ಹರಿಯಲು ಪ್ರಾರಂಭಿಸಿತು.

ಸುಂಗ್ ಯುನ್: ಅದ್ಭುತ. ಮುಂದೇನಾಯಿತು?

ಸಂಪಾದಕರು: ಇದೇ ಸಮಯದಲ್ಲಿ ಕರೋನ ವೈರಸ್ ಗೆ ಔಷಧ ಬಂದು ಆರೋಗ್ಯ ವ್ಯವಸ್ಥೆಯು ಸುಧಾರಣೆಗೊಂಡಿತು. ಇದೇ ಸಂದರ್ಭದಲ್ಲಿ ಜಗಳೂರಪ್ಪನವರು ಒಂದು ಉತ್ತಮ ಮಾನವ ಸಂಪನ್ಮೂಲ ಕಾಯ್ದೆಯನ್ನು ಜಾರಿಗೆ ತಂದರು. ಈ ಕಾಯ್ದೆಯ ಪ್ರಕಾರ ಎಲ್ಲಾ ದೇಶಿಯ ಕಂಪೆನಿಗಳಲ್ಲಿ ಸ್ಥಳೀಯರಿಗೆ (ಅದೇ ಜಿಲ್ಲೆಯವರಿಗೆ) ಅವಕಾಶ ಕಲ್ಪಿಸಬೇಕಾಗಿತ್ತು. ಈ ಕಾಯ್ದೆಯನ್ನು ಹಂತ ಹಂತವಾಗಿ ಜಾರಿ ಮಾಡಲಾಯಿತು. ಈ ಉದ್ದಿಮೆಗಳಲ್ಲಿ ಕೆಲಸ ಮಾಡಲು ಬೇಕಾದ ಉತ್ತಮ ಶಿಕ್ಷಣವನ್ನು ನೀಡಲು ಅದೇ ಜಿಲ್ಲೆಗಳಲ್ಲೇ ಅಗತ್ಯ ಶಿಕ್ಷಣ ಸಂಸ್ಥೆಗಳನ್ನು ತೆರೆಯಲಾಯಿತು. ಅಲ್ಲಿ ವಿದ್ಯಾಭ್ಯಾಸ ಮಾಡಿದವರಿಗೆ ಅದೇ ಜಿಲ್ಲೆಗಳಲ್ಲಿ ನೌಕರಿ ದೊರೆಯಿತು. ಉದ್ದಿಮೆಗೆ ಬೇಕಾದ ಕಾರ್ಮಿಕ ಸಿಬ್ಬಂದಿ ಅದೇ ಜಿಲ್ಲೆಗಳ ಹಳ್ಳಿಗಳಿಂದ ನೇಮಿಸಲ್ಪಟ್ಟರು. ಹೀಗಾಗಿ ಜನರಿಗೆ ಮತ್ತೆ ಉದ್ಯೋಗಕ್ಕಾಗಿ ಮಹಾ ನಗರಗಳಿಗೆ ವಲಸೆ ಬರುವ ಅಗತ್ಯತೆಯೇ ಬೀಳಲಿಲ್ಲ. ಇದರಿಂದ ಜನರ ಅನವಶ್ಯಕ ಓಡಾಟ ತಪ್ಪಿ ಇಂಧನದ ಬೇಡಿಕೆಯೂ ಕಡಿಮೆಯಾಗಿ ಪರಿಸರ ಮಾಲಿನ್ಯವು ಗಣನೀಯವಾಗಿ ಕಡಿಮೆಯಾಗಿಹೋಯಿತು.

**ಸುಂಗ್ ಯುನ್: ಈ ಬದಲಾದ ವ್ಯವಸ್ಥೆ ಕೃಷಿ ವ್ಯವಸ್ಥೆಯ ಮೇಲೆ ಯಾವ ರೀತಿಯ ಪರಿಣಾಮಗಳನ್ನು ಬೀರಿತು?**

**ಸಂಪಾದಕರು: ತಾವು ಉತ್ತಮ ಪ್ರಶ್ನೆಯನ್ನೇ ಕೇಳಿದಿರಿ. ಕೈಗಾರಿಕೆಗಳ ಹಾಗು ಇತರೆ ಉದ್ದಿಮೆಗಳ ಜಿಲ್ಲಾವಾರು ವಿಂಗಡಣೆ ಮಾಡುವಾಗ ಆ ಪ್ರದೇಶದಲ್ಲಿ ಬೆಳೆಯುವ ಬೆಳೆ, ಸಿಗುವ ಖನಿಜ ಸಂಪತ್ತು ಹೀಗೆ ಹತ್ತು ಹಲವು ವಿಚಾರಗಳ ಅಧ್ಯಯನ ನಡೆಸಿಯೇ ಮಾಡಲಾಗಿತ್ತು. ವಾಣಿಜ್ಯ ಬೆಳೆಗಳನ್ನು ಬೆಳೆಯುವ ರೈತರಿಗೆ ತಾವು ಬೆಳೆದ ಬೆಳೆಯನ್ನು ನೇರವಾಗಿ ಕೈಗಾರಿಕೆಗಳಿಗೆ ಮಾರಾಟ ಮಾಡುವ ಅವಕಾಶ ಸಿಕ್ಕಿತು. ಇದರಿಂದ ಮಧ್ಯವರ್ತಿಗಳು ಕಡಿಮೆಯಾಗಿ ರೈತರಿಗೆ ಉತ್ತಮ ಬೆಲೆ ದೊರಕಿ ಅವರ ಆರ್ಥಿಕ ಪರಿಸ್ಥಿತಿ ಉತ್ತಮವಾಯಿತು. ತಮ್ಮ ತಮ್ಮ ಜಿಲ್ಲೆ, ತಾಲೂಕು ಪ್ರದೇಶಗಳು ಅಭಿವೃದ್ಧಿಯಾದ್ದರಿಂದ ರೈತರು ಬೆಳೆದ ದವಸ ಧಾನ್ಯ, ಹಣ್ಣು ತರಕಾರಿಗಳಿಗೆ ಉತ್ತಮ ಮಾರುಕಟ್ಟೆ ಅಲ್ಲಿಯೇ ದೊರೆಯಿತು. ರೈತರು ತಮ್ಮ ಸ್ಥಳೀಯ ಮಾರುಕಟ್ಟೆಗಳಿಗೆ ಎಷ್ಟು ಅವಶ್ಯಕತೆಯಿದೆಯೋ ಅಷ್ಟೇ ಬೆಳೆಗಳನ್ನು ಬೆಳೆಯತೊಡಗಿದರು. ಇದು ರೈತರ ಉತ್ಪನ್ನಗಳು ಪೋಲಾಗುವುದನ್ನು ತಪ್ಪಿಸಿತು ಹಾಗು ಮಣ್ಣಿನ ಆರೋಗ್ಯವನ್ನೂ ಹೆಚ್ಚಿಸಿತು. ಹಳ್ಳಿಗಳಲ್ಲಿನ ಕೃಷಿಯೇತರ ಕಾರ್ಮಿಕರುಗಳಿಗೆ ತಮ್ಮದೇ ಜಿಲ್ಲೆ ಅಥವಾ ತಾಲೂಕಿನ ಕೈಗಾರಿಕೆಗಳಲ್ಲಿ ಕೆಲಸ ಸಿಕ್ಕಿದ್ದರಿಂದ ಅವರ ಆರ್ಥಿಕ ಮಟ್ಟವೂ ಉತ್ತಮವಾಯಿತು.**

**ಸಂಪಾದಕರು: ನಮ್ಮಲ್ಲಿ ಮುಂಚೆ ಭ್ರಷ್ಟಾಚಾರದಿಂದ ಕೂಡಿದ ಆಡಳಿತ ಹಾಗು ರಾಜಕೀಯ ವ್ಯವಸ್ಥೆಯಿತ್ತು. ಆ ಭ್ರಷ್ಟಾಚಾರದ ಮೂಲ ಕಾರಣವೂ ಕೇಂದ್ರೀಕರಣವೇ ಆಗಿತ್ತು. ಬೆಂಗಳೂರು ಮಾತ್ರವೇ ಬೆಳೆಯುತ್ತಿತ್ತು. ಉಳಿದೆಲ್ಲಾ ಪ್ರದೇಶಗಳು ಹಿಂದುಳಿದೇ ಇದ್ದವು. ಯಾವಾಗ ಆರ್ಥಿಕ ವಿಕೇಂದ್ರೀಕರಣವಾಯಿತೋ ಎಲ್ಲಾ ಪ್ರದೇಶಗಳ ಆರ್ಥಿಕ ಮಟ್ಟ ಸಮಾನವಾಗಿ ಬೆಳೆಯಿತು. ಎಲ್ಲಾ ಪ್ರದೇಶಗಳ ಜನರಿಗೂ ಉತ್ತಮ ವಿದ್ಯಾಭ್ಯಾಸ ದೊರೆಯಿತು. ಅಕ್ಷರಸ್ಥ ಹಾಗು ತಿಳುವಳಿಕೆಯುಳ್ಳ ಮತದಾರರು ಮುಂದೆ ನಡೆದ ಚುನಾವಣೆಗಳಲ್ಲಿ ಉತ್ತಮ ಜನ ಪ್ರತಿನಿಧಿಗಳನ್ನು ಆರಿಸಿದರು. 'ಕರೋನ' ರೋಗವೇ ಡಿಜಿಟಲ್ ವಹಿವಾಟುಗಳಿಗೆ ಮುನ್ನುಡಿ ಬರೆದಿತ್ತು. ಆರ್ಥಿಕ ಅಭಿವೃದ್ಧಿ ಡಿಜಿಟಲ್ ವ್ಯವಹಾರವನ್ನು ಬಹಳಷ್ಟು ವೃದ್ಧಿಸಿತು. ಎಲ್ಲಾ ಕೆಲಸಕಾರ್ಯಗಳು ಡಿಜಿಟಲೀಕರಣ ಗೊಂಡವು. ಹಣದ ಹರಿವು ಸಂಪೂರ್ಣ ಡಿಜಿಟಲೀಕರಣವಾಗಿ ಭ್ರಷ್ಟಾಚಾರ ಕ್ಷೀಣಿಸುತ್ತಾ ಸಾಗಿತು.**

**ಸುಂಗ್ ಯುನ್ ಗೆ ಈ ವಿಚಾರಗಳನ್ನು ಕೇಳಿ ಮೈ ಪುಳಕಗೊಂಡಿತು. ಭಾರತದಂತಹ ದೇಶದಲ್ಲಿನ ಪ್ರಜಾಪ್ರಭುತ್ವವನ್ನು ಹೊಂದಿರುವ ರಾಜ್ಯವೊಂದರಲ್ಲಿ ಈ ರೀತಿಯ ಅಭಿವೃದ್ಧಿ ಊಹಿಸಲೂ ಸಾಧ್ಯವಿರಲಿಲ್ಲ. ಮನಸ್ಸಿದ್ದರೆ ಏನನ್ನು ಬೇಕಾದರೂ ಸಾದಿಸಬಹುದು. ಇದಕ್ಕೆ ಜಗಳೂರಪ್ಪನವರಂತಹ ದಿಟ್ಟ ನಿರ್ಧಾರದ ನಾಯಕರೊಬ್ಬರು ಬೇಕು. ಮನುಷ್ಯನ ದಿಟ್ಟ ನಿರ್ಧಾರದ ಮುಂದೆ ಏನೂ ಅಸಾಧ್ಯವಲ್ಲ. ಇದಕ್ಕೆ ಕರ್ನಾಟಕವೇ ಸಾಕ್ಷಿ. ಕರ್ನಾಟಕ ಇತರೆ ಹಿಂದುಳಿದಿರುವ ಹಾಗು ಮುಂದುವರೆಯುತ್ತಿರುವ ದೇಶ ಅಥವಾ ಪ್ರಾಂತ್ಯಗಳ ಪ್ರಗತಿಪರತೆಗೆ ಒಂದು ಆದರ್ಶವಾಗಬೇಕು ಹಾಗು ಇದನ್ನು ನಾನು ನನ್ನ ಲೇಖನಗಳ ಮೂಲಕ ಎಲ್ಲರಿಗೂ ತಿಳಿಸಿಕೊಡಬೇಕು ಎಂದು ನಿರ್ಧರಿಸಿ ಜ್ಞಾನಲೋಕದ ಸಂಪಾದಕರಿಗೆ ಕೃತಜ್ಞತೆ ಸಲ್ಲಿಸಿ ತನ್ನ ದೇಶಕ್ಕೆ ಮರಳಿದನು.**



# 'शिव' व्यक्तिमत्व : भाग २

- श्री अतुल नेने

## व्यक्तिमत्व विशेष

### *संघटन कौशल्य*

शिवाजी महाराजांनी त्या काळाच्या विघटित, लाचार समाजाला प्रेरित केले, एकत्रित केले. लहान वयात जिवाला जीव देणारे सवंगडी मिळविले. त्यांच्यासोबत ज्या स्वराज्याच्या शपथा घेतल्या त्या अखेरपर्यंत जागवल्या. वयाच्या अठराव्या वर्षी किल्ला बांधला ! राजगडाची निर्मिती जनमानसावर बिंबली.

महाराजांनी आपल्या साथीदारांना वेळोवेळी पारखून घेतले. चूक छोटी असो वा मोठी, योग्य शिक्षा देऊन दहशत बसविली. तसेच सर्व छोट्या मोठ्या चांगल्या गोष्टींचे साजेसे कौतुक करून प्रोत्साहित केले. त्यांनी आपल्या साथीदारांचे गुण ओळखून त्यांना संधी दिली. त्यांच्यातील प्रयोगशीलतेला उत्तेजन दिले. तानाजी, मोरोपंत पिंगळे, जिवा महाले, अशी अनेक माणसे जोडली.

शिवचरित्र म्हणजे निर्भयतेचा स्तंभ आहे. त्यांची निर्भयता लोकांना अचंबित करायची. जो मरणाला भीत नाही, त्यासाठी मरायला लोक भीत नाहीत.

**महाराजांनी जी राष्ट्रीय अस्मिता जागी केली तीच पुढे स्वातंत्र्य वीरांपर्यंत सर्वांना प्रेरक ठरली. यापुढेही त्याची प्रचीती येईल अशी खात्री वाटते.**

संघटनेला एक ध्येय वा उद्दिष्ट असते. महाराजांच्या संघटनेचा पाया प्रजेचे संरक्षण व संगोपन हा होता. स्त्री व गरीब यांना अभय हे त्यांचे दिशा दर्शक होते. 'हे परमेश्वराचे कार्य आहे' ही त्यामागची प्रेरणा होती. तसेच 'अहत पेशावर तहत तंजावर राष्ट्र एका ध्वजाखाली' हे त्यांचे ध्येय होते असे फ्रेंच प्रवासी ॲबे कॅरे याने नमूद केले आहे. महाराजांनी समाजाच्या मनातील महत्वाकांक्षा जागृत केली आणि लोक आपसातली छोटी वैमनस्ये विसरले.

महाराजांनी सामान्य व्यक्ति मध्ये विश्वास निर्माण केला. सामान्य नागरिकाला आपले सुख टिकावे, हा राजा टिकावा असे वाटले म्हणून तो स्वराज्याला सामील झाला. महाराजांनी पुरेसा वेळ देऊन समाजाची स्वराज्याला पूरक अशी मनोभूमिका निर्माण केली.

संघटकानंतर ती संघटना किती वेळ टिकते यावर कौशल्याचा निकश लावता येतो . महाराजांच्या पश्चात औरंगजेबाने जंग जंग पछाडले तरी त्याला स्वराज्य काबीज करता आले नाही . ' इथे गवतालाही भाले फुटतात की काय !' असे उद्गार त्यानी काढले . तसेच एका धडक युद्धानंतर तो विस्मयचकित झाला व त्याने वर्णन असे केले : ' आज आमच्या सैन्यावर पाचशे शिवाजींनी हल्ला केला' . महाराजांच्या संघटन कौशल्याला शत्रूकडून मिळालेले हे प्रमाणपत्रच आहे ‡ .

महाराजांनी जी राष्ट्रीय अस्मिता जागी केली तीच पुढे पेशव्यांना, मग महादजी शिंद्यांना, तसेच झाशीच्या राणी लक्ष्मीबाई, तात्या टोपे व **1857** च्या सर्व वीरांना, आणि एवढेच नव्हे तर लोकमान्य टिळक, स्वातंत्र्यवीर सावरकर, सुभाषचंद्र बोस आदि स्वातंत्र्य वीरांना प्रेरक ठरली . यापुढेही त्याची प्रचीती येईल अशी खात्री वाटते .

## *यशोदायी युदधनीति*

शिवाजी महाराजांनी योग्य जागा निवडून नवीन किल्ले बांधले व उपयुक्त जागांवरील जुने किल्ले बळकट केले . सैन्याला नीतिमूल्याधारित शिस्त लावली . तसेच वेळेवर वेतन व इतर व्यवस्थापकीय नेटकेपणातून ती शिस्त पाळायला मदत केली . रयत आणि सैन्य यांच्यात परस्पर-हित-विसंगती होणार नाही याची काळजी घेतली . सामान्य नागरिकालाही आपलेसे करून व स्वराज्याच्या ध्येयाने प्रेरित करून सैन्याला पूरक असा अप्रत्यक्ष सहभाग मिळवला .

पराकोटीचा निपुण हेर विभाग जुळवला . त्याचा प्रत्यय विशेष करून लाल महाल विजयाची योजना आखताना केलेला दिसतो . त्या योजनेच्या अचूकतेमुळे स्वत: पत्करलेली मोठी जोखीम सार्थक ठरलेली दिसते . महाराजांच्या सर्वच युद्धात या योजकाच्या अचूकतेमुळे, कमीतकमी कष्टाने व संख्याबळाने जास्तीत जास्त यश संपादन केल्याचे दिसते .

महाराजांनी भौगोलिक परिस्थितीचा राज्याच्या सुरक्षिततेसाठी भरपूर उपयोग केला . सह्याद्रीचा अवघडपणा युद्धनीतिमध्ये विणला . छोटया पण तडफदार तुकड्या गनिमी काव्याने छापे घालून शत्रूला हैराण करीत पण स्वत:ची हानी टाळीत . 'खिंड लढविणे' , 'खिंडीत गाठून मारणे' हे वाक्प्रचार भाषेला महाराजांच्या युद्धनीतिने दिले .

‡ "शिवाजीने जे राज्य निर्माण केले त्यासाठी **27** वर्षे जनता लढली . शिवाजी वारल्यावर संभाजीच्या नेतृत्वाखाली, तो मारला गेल्यावर **19** वर्षे, ज्याला जसे सुचेल तसे सर्वजण लढत होते ." - श्री नरहर कुरुंदकर, प्रस्तावना, श्रीमान योगी



जावळीच्या खो-या सारखा दुर्गम भाग स्वराज्याला बचावात्मक पवित्रा घेण्यास किती उपयुक्त आहे हे ओळखून तो स्वराज्यात सामील केला. याचे अधिकतर श्रेय त्यांच्या वडीलधा-यांना दयायचे ठरवले, तरी प्र तापगड विजयाच्या योजनेत या खो-याचा उपयोग करण्यात मात्र महाराजांचाच हातखंडा दिसतो †. अशा रीतीने राज्यासाठी बचावात्मक सामर्थ्य प्रस्थापित केले.

विविध युद्धात स्थल-काल विशेषावलोकन करून आक्रमकतेची योग्य सांगड घातली. नवनव्या युक्त्या वापरल्या. दर वेळी नवी नीति अवलंबली. प्रतापगड विजयाचे वेळी अतिकुशल वकिली कसब दाखवून शत्रूला जावळीत आणले. लाल महाल विजयाचे वेळी स्वराज्याची सर्व बाजूंनी गळचेपी होत असताना व शत्रूने स्वगृहातच तळ ठोकला असताना, अशक्य वाटणारे धाडस करून व विलक्षण बुद्धिमत्ता उपयोगून 'मूले कुठार:' म्हणजे 'मुळावर घाव घालणे' हे तंत्र योजले. तसेच धीराने खेळलेले राजकारणी डावपेच व स्वत: नजरकैदेत असतानाही आपल्या संघटनेशी ठेवलेला संपर्क व समन्वय या योगे महाराजांनी आग-याहून सुटका करून घेतली.

स्वराज्याचे अर्थतंत्र बेताचेच असल्याकारणाने, युद्धतंत्र काटकसरी होते. पण दरवेळी यश मात्र खचितच खेचून आणले. 'यशस्वी माघार' याची अनेक उदाहरणे महाराजांच्या युद्धात दिसतात - तो कधी प्रतिष्ठेचा विषय झाला नाही. नेहमीच यशाला अधिक महत्व दिले ‡. म्हणुनच अनेक वेळा आपल्याहून बलाढ्य असलेल्या शत्रूवर त्यांनी विजय मिळवला. अशक्यप्राय वाटणा-या संकटातून इतक्या सातत्याने यश मिळविणा-याची इतिहासातील आणखी किती उदाहरणे आपल्याला सांगता येतील ?

## *राज्य व्यवस्थापन*

स्वराज्य निर्माण करणे, त्यासाठी संघटना उभी करणे व रक्षणासाठी युद्धनीति योजणे या बरोबरच शांतता काळामध्ये राज्याचे व्यवस्थापन करणे व प्रजेची आर्थिक उन्नती साधणे ही कार्येही महाराजांनी केली. राज्यातल्या सामान्य नागरिकाच्या समृद्धीवरून राज्याच्या समृद्धीचे मूल्यमापन करायचे असते. भारत हा कृषीप्रधान देश. निसर्गाचे वरदान व मानवी कष्ट याचा योग जुळून आला व भारत संपन्न झाला.

---

‡ "विजयाने राज्य वाढावे, सामर्थ्य वाढावे, पराजयात प्रदेश कमी झाला, तरी सामर्थ्य व जिद्द टिकावी, हा नवा इतिहास शिवजीपासून सुरू होतो." - श्री नरहर कुरुंदकर, प्रस्तावना, श्रीमान योगी

† "मागे कर्तबगार शहाजी, पुढे कर्तबगार संभाजी, मध्ये महान निर्माता शिवाजी या मानवी पद्धतीने शिवाजीचे मोठेपण समजून घेतले जावे." - श्री नरहर कुरुंदकर, प्रस्तावना, श्रीमान योगी

# ज्ञान  लोक

**आपल्या कारकीर्दीत 33 गावांची 33,000 गावे केली, खजिना 5 कोटी पासून 5000 कोटी केला आणि 500 माणसांपासून सुरवात करून 50 लाख माणूस जमविला - रयतेचे शोषण न करता, सुराज्य केले**

परकीय आक्रमणानंतर कर लादून ही संपन्नता ओरबाडली गेली. कर लादताना जमिनीचा पोत गृहित धरला नाही, आणि सरसकट कर लावला की कमी सुपीक जमिनी शेतकरी पिकवीत नाही कारण पिकवून कर दिल्यावर त्याच्या हाती काहीच लागत नाही. तसेच कर नाही भरू शकला तर शेतक-याचे पुढील वर्षाचे बियाणे जप्त होत असे ! अशा अनेक धोरणांमुळे स्वराज्य स्थापन होई पर्यंत सत्तर टक्के जमिनी नापीक झाल्या होत्या.

स्वराज्याच्या मूल्याधिष्ठित जडणघडणीमुळे व न्यायी राजा मुळे शासानात सुव्यवस्था आली. त्याच्या जोडीला शेतीला प्रोत्साहन देण्याचा यत्न महाराजांनी केला. शासकीय खर्चाने अवजारे, बियाणे देणारे व पडीक जमीन लागवडीखाली आणायला रयतेला उद्युक्त करणारे शिवाजी महाराज, या देशाला मिळालेले एकमेव शासक आहेत.

त्यांनी शेतक-याला पहिली पाच वर्षे सारा माफ केला. अवजारे व बियाणे यांची मदत केली व पाच वर्षात उत्पादन 200 कोटी पोत्यांवरून 1000 कोटी पोत्यांवर नेले. जिथे आधी समाजाला 60 टक्के करपातळीने नाडूनही जेमतेम 120 कोटी पोती कर मिळत होता, तिथे स्वराज्यात 30 टक्क्यावर करपातळी आणूनही 300 कोटी पोती सरकारी खजिन्याला मिळाली. शिवाजी महाराजांच्या कारकीर्दीच्या सुरवातीची आणि त्यांच्या मृत्युसमयीची राज्याची स्थिती पाहता असे दिसते की त्यांनी 33 गावांची 33,000 गावे केली, खजिना 5 कोटी पासून 5000 कोटी केला आणि 500 माणसांपसून सुरवात करून 50 लाख माणूस जमविला. सर्वात प्रकर्षाने जाणवणारी गोष्ट म्हणजे हे सगळे रयतेचे शोषण न करता केले. सर्व काही निसर्गसंपदेचे आणि मनुश्यबळाचे उत्तम समायोजन साधून केले. सुराज्य केले †.



† "शिवाजी परंपरागत छात्रधर्मात बसवू नये. त्यांची संगती कौटिल्याच्या राजधर्मात बसते." - श्री नरहर कुरुंदकर, प्रस्तावना, श्रीमान योगी

# व्यक्तिमत्व सार व बोधामृत

आपण आतापर्यंत महाराजांचे एक नेता म्हणून, एक संघटक म्हणून, एक योद्धा म्हणून व एक शासक म्हणून पैलू पाहिले. याशिवायही त्यांचे अनेक गुण अनुकरणीय आहेत. त्यांच्या जीवनातील घटनांपासून खूप काही शिकण्यासारखे आहे. सगळ्यात उल्लेखनीय गोष्ट म्हणजे ते स्वत:चे तत्वज्ञान जगले. त्यांच्यावर लिहिलेल्या साहित्याच्या वाचनाने त्यांच्या व्यक्तिमत्वाची उत्कटता, विशालता व प्रयत्नवाद आपल्यातही परिवर्तन करतो - एखाद्या परीस स्पर्शाप्रमाणे. शिव व्यक्तिमत्वाचा आपण सखोल अभ्यास केलात, तर आपल्यालाही हा अनुभव येईल. अशा या प्रेरणादायी महामानवाचे जे चार व्यक्तिविशेष मला भावले ते असे :

- बुद्धी, शक्ति यांचा असीम संगम
- सदैव पर्यायांचा शोध आणि अवलंब (सर्जनशीलता)
- प्रचंड आत्मविश्वास
- सकारात्मक विचार व क्रियाशीलता

हे गुण आपण स्वत:मध्ये बाणवून आपला व्यक्तिमत्व विकास साधूयात.

**शिक्षणाने, संस्कारांनी व शरीर संवर्धनाने बुद्धी व शक्ति विकसित करता येतात. शुद्ध मन व सद्हेतू असल्यास आत्मविश्वास बळावतो. विचारपूर्वक ध्येय ठरवले आणि दृढ निश्चय केला की आपण कार्यपूर्ती साठी पर्याय शोधतो आणि अवलंबतो. छोटे विजय मिळवीत आपण आपला दृष्टिकोन सकारात्मक ठेवतो आणि सदैव कार्यरत राहतो.**

हे अगदी संभव आहे. जेवढा प्रयत्न प्रामाणिक, तेवढे यश हमखास, असे हे सूत्र आहे. शिवाजी महाराजांना देवत्व बहाल करून व त्यांच्या कर्तृत्वाला 'अशक्य' असे संबोधून आपण आपल्यातील बदलाचे पहिले पाऊल उचलता उचलता थांबवतो. पण जर केवळ या चार कलमी सूत्राचा अवलंब केला, आणि त्यावर सातत्याने चिंतन व आचरण केले, तर ती हळूहळू एक चांगली सवय होईल आणि आपले व्यक्तिमत्व आहे त्यापेक्षा अधिक समृद्ध व संपन्न नक्कीच होईल.

ते तसे होवो ही ईश्वरचरणी प्रार्थना.

# समारोप

माझे मित्र श्री सचिन गाडगीळ यांनी शिवचरित्र अभ्यास शिबिराची सूचना देऊन व त्यासाठी प्रोत्साहित करून हा योग घडवून आणला. माझे मित्र श्री अमित बागाइतकर व श्री श्रीराम नारखेडे यांनी सहाध्यायी होऊन मला साथ केली. एवढा उत्तुंग विशय कानावर पडल्यावर स्फूर्ती न मिळाली तरच नवल. पण लिखाण पूर्ण झाले ते मित्रांच्या उत्तेजनामुळे. लहानपणापासून आई वडिलांनी वाचनाची गोडी लावल्यामुळे महाराजांवरील काही पुस्तके वाचली होती. पण मध्यंतरीच्या काळातील वाचनाची उदासीनता शिबिराच्या निमित्ताने कमी झाली आहे. महाराजांवर अजून वाचण्याचा व या लेखावर मनन करत राहण्याचा मानस आहे. रणजित देसाई लिखित श्रीमान योगीला श्री नरहर कुरुंदकर यांनी दिलेली प्रस्तावना काळजास भिडली. त्यातील मार्गदर्शक उतारा असा :

> **"राज्य टिकवण्यासाठी जनता लढण्याचा उल्लेख, भारताच्या इतिहासात प्रथम कलिंगला मिळतो. नंतर चौथ्या शतकाशेवटी यौधेयाचा आहे. कदाचित टोळीवाले शिकंदरविरोधी लढले असतील. जिथे जनता लढते, तिथे फौजा निकामी होतात. 1200 वर्षानंतर शिवाजीच्या राज्यासाठी जनता लढली. ही आत्मीयता कशी निर्माण झाली याचे उत्तर धर्माभिमान नव्हे. आपण लढू शकतो, हा आत्मविश्वास निर्माण करणे, छापे घालण्याचे तंत्र निर्माण करणे, व वीरतेच्या खोट्या कल्पनांच्या आहारी जाऊन लढून मरणे यापेक्षा - टिकणे, पळणे, थकवणे, नाश करणे - हे नवे मूल्य प्रस्थापित करणे हे एक उत्तर; व प्रजेच्या इहलौकिक सोयी संभाळणे हे दुसरे उत्तर. धर्माभिमान क्रमांकाने तिसरा."**

### *वाचनीय*

राजा शिवछत्रपति - बाबासाहेब पुरंदरे

श्रीमान योगी - रणजित देसाई

वेध महामानवाचा - श्रीनिवास सावंत

रियासत (खंड 1 व 2) - गो. सा. सरदेसाई

पुण्येश्वर छत्रपति शिवाजी - बाळशास्त्री हरिदास

|| शुभं भवतु ||

# Poem: Parrot Flock

- Dr. Chandana Sri

English translation of “Rashtra Kavi” Manjeshwara Govinda Pai’s Kannada poem “giLiviNDu”

O you dear words of mine!
Lo upon these waves of time
I now set you all afloat
Like wee lamps in tiny boats
However world's breath - winds blow
You must fend for yourselves! Go!

Like Ma songbird keeps an eye
On her babes till they can fly
Gathers them into her nest
Tries to do her very best
Likewise, O my words, I too
In these books did gather you!

To me, I thought you do belong
So I drag'd you all along
Then, I paused to think midway
Just because you chose, some day
My bosom to sing your song
Claiming you as mine is wrong

Just because it chose to dock
In a garden on the way
Tell me, does the parrot flock
Belong to that garden, pray?

# ಕವನ: ಭೂತಾನದ ಹಾಡು

- ವೆಂಕಟೇಶಪ್ರಸನ್ನ

"ಕ್ಯಾಲ್ವಿನ್ ಅಂಡ್ ಹಾಬ್ಸ್" ಕಾರ್ಟೂನಿನ ಖ್ಯಾತಿಯ ಬಿಲ್ ವಾಟರ್‌ಸನ್ ಅವರ "ದಿ ಯೂಕಾನ್ ಸಾಂಗ್" ಪದ್ಯದ ಕನ್ನಡಾನುವಾದ. ಈ ಮಕ್ಕಳ ಪದ್ಯದಲ್ಲಿ ಕ್ಯಾಲ್ವಿನ್ ತನ್ನ ಹೆತ್ತವರ, ಶಾಲೆಯ ಶಿಕ್ಷಕರ ಕಟ್ಟುಪಾಡುಗಳಿಂದ ಬೇಸತ್ತು ತನ್ನ ಆಟದ ಹುಲಿ ಹಾಬ್ಸ್‌ನೊಂದಿಗೆ ಮನೆ, ಊರು ಬಿಟ್ಟು ದೂರ ಹೋಗಿ ಮನಸ್ಸಿಗೆ ಬಂದಂತೆ ಬಾಳುವ ಕನಸು ಕಟ್ಟುವ ಸಂದರ್ಭ:

ತಂದಿದೆ ನೋಡಿರಿ ನನ್ನಯ ಹುಲಿಮರಿ
ಹಿಮದೊಳು ಜಾರುವ ಬಂಡಿಯನು,
ತಿಂಡಿಯ ಪೊಟ್ಟಣ ನಾ ಕಟ್ಟಿರುವೆನು
ಮರಳದ ಪಯಣಕೆ ಹೊರಟಿಹೆವು!

ತೊರೆದಿಹೆವಿಲ್ಲಿಯವರೆಗಿನ ಬಾಳನು,
ವಿದಾಯ ಅಮ್ಮಗೆ ಅಪ್ಪನಿಗೆ!
ರೋಸಿರುವೆವು ನಿಮ್ಮಾಜ್ಞೆಯ ಪಾಲಿಸಿ
ಮುಗಿದಿಹುದಿಲ್ಲಿಗೆ ನಿಮ್ಮ ಹಗೆ!

ವರುಷದೊಳೆಲ್ಲಾ ಹಿಮ ಸುರಿವಲ್ಲಿಗೆ
ಸಾಗಿ ಬದುಕ ನಾವ್ ಸವಿಯುವೆವು,
ಕೋಣೆಯ ಶುಚಿಯಾಗಿಸು ನೀನೆನ್ನುವ
ಬೈಗುಳ ಕೇಳದೆ ಬದುಕುವೆವು...

ಭೂತಾನವೆ ನಮಗಿರಿಸಿಹ ತಾಣವು!
ಅಲ್ಲಿಯೆ ಜೀವನ ಮಾಡುವೆವು.
ಕಿರುಚುತ ಶಪಿಸುತ ಅದರೆತ್ತರದಲಿ
ಮನಸಿಗೆ ಬಂದಂತಲೆಯುವೆವು!




ಶಾಲೆಗೆ ಹೋಗುವ ಕಾಟವೆ ತಪ್ಪಿತು,
ನಮ್ಮನು ಯಾರೂ ಪಳಗಿಸರು.
ಭಯವನು ತರಿಸುವ ಶಿಕ್ಷಕರಾರೂ
ಲೆಕ್ಕವ ಕಲಿಸದೆ ಕೊರಗುವರು!

ಊಟದ ತಟ್ಟೆಯ ಅಂಟುಗಳೆಲ್ಲವ
ತೊಳೆಯುವ ಗೋಜನು ಮರೆಯುವೆವು,
ಮನಸಿಗೆ ಬಂದಂತಗಿವೆವು ತಿನಿಸನು
ಸಿಕ್ಕಿದ ಚಮಚವ ಬಳಸುವೆವು!

ಹಿಮನಾಯಿಗಳೇ ನಮ್ಮಯ ಗೆಳೆಯರು
ಚಂದ್ರನ ನೋಡುತ ಊಳುವೆವು,
ನಿದ್ದೆಯ ಮಾಡದೆ ಎಚ್ಚರದಿಂದಲಿ
ಬೇಟೆಗೆ ಕಾಡಿಗೆ ತೆರಳುವೆವು.

ಎಂತಹ ಬಾಳದು! ಕಾಯಲಸಾಧ್ಯವು,
ಮಂಜಿನ ನಾಡಿಗೆ ತಲುಪುವುದು,
ನಮ್ಮಯ ಪಾಡಿಗೆ ನಾವೇ ಒಡೆಯರು
ಚಂದದ ಬಾಳನು ನಡೆಸುವೆವು!

ಕಟ್ಟಳೆ ಹಾಕಲು ಹೆತ್ತವರಿಲ್ಲದ
ಹಿಮವಿಹ ತಾಣಕೆ ಹೊರಟಿಹೆವು!
ದೊಡ್ಡವರೆನ್ನುವ ಭೂತಗಳಿಲ್ಲದ
ಭೂತಾನಕೆ ನಾವ್ ಹೊರಟಿಹೆವು!




# Redemption

- Rashmi Vinay

I am hungry, but I can wait. I will wait to see if she will come back, because today, she made me think beyond my hunger.

I wonder why I let her go, for I had found food after days! Perhaps, it is this place... It reminds me of something.

This big tree here, oh, I remember now! Isn't this the place that Mother brought me to when I was small! I still remember her words...



"What are these Mother? I have never seen them in the forest before."

"Yes son, you are right, they don't belong to the forest. They are cattle. They are very gentle and very kind. They are closer to the Gods than we are."

"Oh! is it? But they seem very slow and very meek, Mother. You could pounce on them and hunt them in an instant..."

"Oh no, Arbudha! You know, our life is not just about hunting and eating. Some of us, if we are lucky, are given opportunities to be kind and gentle too. And when we are reborn, we might be born less cruel. That's how we move up higher, my son."

"Higher?"

"Oh, you are still a little boy, Arbudha! You will know someday. But remember, don't prey on cattle, son. Some of them may be our forefathers!"



Mother! Where have you gone! That stormy day, after I fell asleep by your side, where did you go?!

I starved for many days, Mother, you didn’t stay to teach me how to hunt! But I learnt to survive, without you. It was tough. I had to find a way to feed myself more often. That’s when I started hunting cattle, Mother. But I don’t find them often. They never graze in the same place. I ventured far and came here today.

But I wonder why I let her go, that cow. I chased her for a while, and I was about to pounce upon her, but she turned towards me!

Her eyes! Oh what was it that I saw in her eyes! I forgot my hunger pangs that moment!

Oh! those eyes, they reminded me of you! I saw you in her eyes, Mother! It was you!

Oh no! Mother, was this the first time you came, or have I missed seeing you all this while?

Oh Mother, please tell me! Did you die? Did you come back and have I killed you again!?

There! She comes back as she had promised!

"Go away, O holy one! Go home to your loved ones! How can I ever kill you?

Here I go, to be born again. Thank you for showing me the way!"

Mother, here I come!



# ಕವನ: ಎಲ್ಲರನು ಪ್ರೀತಿಸುವ ಹೃದಯ ನೀಡು

- ಅರುಣ್ ರಂಗನಾಥ್

ಜಗದೊಡೆಯ ನೀ ನಮ್ಮ ಕಾಪಾಡು,
ಎಲ್ಲರನು ಪ್ರೀತಿಸುವ ಹೃದಯ ನೀಡು.

ಈ ವಿಸ್ಮಯ ಬದುಕಿನಾಟಕೆ ನೀ ಸೂತ್ರಧಾರಿ,
ನಿನ್ನಾಣತಿಯಂತೆ ನಡೆಯುವ ನಾ ಪಾತ್ರಧಾರಿ.
ಈ ಬಾಳು ಸಾಗಲು, ನಿನ್ನೊಲುಮೆಯ ರಕ್ಷಣೆಯೇ ರೂವಾರಿ.

ಕಡುಬಡವ ನಾ, ಅರ್ಪಿಸಬಲ್ಲೆ ನಿನಗೆ
ಕೇವಲ ಪ್ರಾರ್ಥನೆಯ ಹೂ ಹಾರ
ಹುಲುಮಾನವ ನಾ, ಹೇಗೆ ತಿಳಿಯಲಿ
ನಿನ್ನ ಅಗೋಚರ ಶಕ್ತಿಯ ಸಂಚಾರ
ಪ್ರತಿಘಳಿಗೆ ಕಾಪಾಡುವೆ, ನಮ್ಮನು
ನಿನ್ನ ಕಾರುಣಾಪ್ರೇಮ ಅಪಾರ

ಕೊಚ್ಚಿಹೋಗಲೆಲ್ಲ ಮನದ ಕೊಳೆಕಲ್ಮಶ
ನಿನ್ನ ಪ್ರೀತಿಸಾಗರದ ಅಲೆಯಲಿ
ದಾರಿ ತೋರಿಸೆಮಗೆ ಪಡೆಯಲು ನಿನ್ನ ಸಾಕ್ಷಾತ್ಕಾರ
ಭಕ್ತಿಯ ಮೇರು ಶಿಖರದಲಿ

ಜಗದೊಡೆಯ ನೀ ನಮ್ಮ ಕಾಪಾಡು,
ಎಲ್ಲರನು ಪ್ರೀತಿಸುವ ಹೃದಯ ನೀಡು.

# ಹೀಗೊಂದು ಆಲೋಚನೆ

**- ವೆಂಕಟೇಶಪ್ರಸನ್ನ**

ನೆನ್ನೆ ಸಂಜೆ ಒಂದಷ್ಟು ಹೊತ್ತು ವಿದ್ಯುತ್ ಅಡಚಣೆಯುಂಟಾದಾಗ ಮನೆಯಿಂದ ಹೊರಬಂದು ನೋಡಿದೆ. ಸಲ್ಪ ಹೆಚ್ಚೇ ಕತ್ತಲು ಕವಿದ ಹಾಗಿತ್ತು. ಲಾಕ್‌ಡೌನ್‌ನಿಂದಾಗಿ ರಸ್ತೆಯಲ್ಲಿ ಹೆಚ್ಚು ವಾಹನಗಳೂ ಇರಲಿಲ್ಲ; ಒಂದೆರಡು ಗಂಟೆಗಳ ಮುಂಚೆ ಬಂದ ಭಾರೀ ಮಳೆಯಿಂದಾಗಿ ಜನರೂ ಮನೆ ಸೇರಿದ್ದರೇನೋ, ಕಾಲುದಾರಿಗಳೂ ನಿರ್ಜನವಾಗಿದ್ದವು. ಸುತ್ತಮುತ್ತಲಿನ ಮನೆಯ ಜನರೂ ತಮ್ಮ ತಮ್ಮ ಮನೆಯೊಳಗೆ ಸೇರಿದ್ದರು. ಈ ಬೆಳಕು, ಶಬ್ದ ಎರಡೂ ಇಲ್ಲದ ವಾತಾವರಣ ಬೆಂಗಳೂರಿನ ಮಟ್ಟಕ್ಕೆ ಅಪರೂಪವೇ. ಸುಮಾರು ಒಂದು ೧೫ - ೨೦ ನಿಮಿಷಗಳಷ್ಟು ಕಾಲ - ವಿದ್ಯುಚ್ಛಕ್ತಿ ಪೂರೈಕೆ ಮತ್ತೆ ಆರಂಭವಾಗುವುದರೊಳಗೆ - ನಮ್ಮ ಮನೆಯ ಆವರಣದಿಂದಲೇ ಈ ಪ್ರಶಾಂತ ಪರಿಸರದಲ್ಲಿ ನಿಂತು ಹೊರನೋಡುತ್ತಿದ್ದಾಗ ಮನಸ್ಸಿನಲ್ಲಿ ಒಂದಷ್ಟು ವಿಚಾರಗಳು, ನೆನಪುಗಳು ಮಿಂಚಿ ಹೋದವು.

ಚಿಕ್ಕಂದಿನಲ್ಲಿ ಸಣ್ಣ ಊರೊಂದರಲ್ಲಿ ವಿದ್ಯಾರ್ಥಿಯಾಗಿ ಬೆಳೆಯುತ್ತಿದ್ದಾಗ ಇಂತಹ ವಿದ್ಯುತ್ ಅಡಚಣೆಗಳು ಸಾಮಾನ್ಯವಾಗಿತ್ತು. ಆಗೆಲ್ಲಾ ಚಾರ್ಜ್‌ಲೈಟುಗಳಾಗಲೀ ಬ್ಯಾಟರಿ-ಇನ್‌ವರ್ಟರ್‌ಗಳಾಗಲೀ ಇಷ್ಟೊಂದು ಹಾಸುಹೊಕ್ಕಾಗಿರಲಿಲ್ಲ. ಮಧ್ಯಮವರ್ಗದ ಜನರಿಗೆ ಅವುಗಳನ್ನು ಕೊಂಡುತಂದು ಬಳಸುವ ಶಕ್ತಿಯೂ ಇರಲಿಲ್ಲವೆನ್ನೋಣ. ಅಷ್ಟೇ ಅಲ್ಲದೆ ಈ ವಿದ್ಯುತ್ ಅಡಚಣೆಗಳನ್ನೂ ಜೀವನದ ಒಂದು ಭಾಗವನ್ನಾಗಿ ಸ್ವೀಕರಿಸಿಬಿಟ್ಟಿದ್ದರು ಜನ. ಕೆಲವೊಮ್ಮೆ ಸಂಜೆಯ ಹೊತ್ತು ಗಂಟೆಗಟ್ಟಲೆ ವಿದ್ಯುತ್ ಇರುತ್ತಿರಲಿಲ್ಲ. ಆಗ ಒಮ್ಮೊಮ್ಮೆ ಸಂಬಂಧಪಟ್ಟವರನ್ನು ಶಪಿಸಿದ್ದಿದ್ದರೂ, ಆ ಕ್ಷಣಗಳಿಗೂ ಒಂದು ಸೊಬಗಿತ್ತೇನೋ ಎಂದು ಈಗ ಅನ್ನಿಸುತ್ತದೆ. ಆಗೆಲ್ಲಾ ಸಂಜೆ ಹೊತ್ತು ವಿದ್ಯುತ್ ಸಂಚಾರ ನಿಂತುಹೋದಾಗ ನಮಗಿದ್ದ ಆಯ್ಕೆಗಳು ಎರಡು:

೧. ಶಾಲೆಯಲ್ಲಿ ಕೊಟ್ಟಿರುವ ಮನೆಗೆಲಸ ಮಾಡಿ ಮುಗಿದಿಲ್ಲದಿದ್ದರೆ, ಅಥವಾ ಇನ್ನು ಕೆಲವು ದಿನಗಳಲ್ಲೇ ಯಾವುದಾದರೂ ಪರೀಕ್ಷೆ ಬರುವುದಿದ್ದರೆ ಆಗ ಬೇರೆ ಗತಿಯೇ ಇಲ್ಲ. ದೀಪದ ಬುಡ್ಡಿ ಹಚ್ಚಿಕೊಂಡು ಓದು-ಬರಹ ಮುಂದುವರೆಸಲೇಬೇಕಾಗಿತ್ತು. "ಸೊಸೈಟಿ" ಎಂದು ಕರೆಸಿಕೊಳ್ಳುತ್ತಿದ್ದ ನ್ಯಾಯಬೆಲೆ ಅಂಗಡಿಯಿಂದ ತಿಂಗಳಿಗೊಮ್ಮೆ ತರುತ್ತಿದ್ದ ನೀಲಿ ಬಣ್ಣದ ಸೀಮೆ ಎಣ್ಣೆ ಬಳಸಿ ಉರಿಸುತ್ತಿದ್ದ ಎರಡು ಚಿಮಣಿ ಬುಡ್ಡಿಗಳ ಮಹತ್ವ ಹೆಚ್ಚೇ ಇತ್ತು. ಒಂದು ಬುಡ್ಡಿಯನ್ನು ಹಚ್ಚಿ ಮನೆಯ ಮಧ್ಯೆ ಎಲ್ಲರಿಗೂ ಬೆಳಕಾಗುವಂತೆ ಇಟ್ಟರೆ ಇನ್ನೊಂದನ್ನು ಅಡುಗೆ ಮನೆಯಲ್ಲಿ ಬಳಸಲಾಗುತ್ತಿತ್ತು. ಮನೆಯ ಮಧ್ಯದ ಬುಡ್ಡಿಯ ಸಹಾಯದಲ್ಲೇ ನನ್ನ ಓದು. ಮಧ್ಯೆ ಬೇಜಾರಾದಾಗ ಅದರ ಬೆಳಕಲ್ಲೇ ಏನಾದರೂ ಚಿತ್ರ ಗೀಚುವುದೋ ಅಥವಾ ಆ ಚಿಮಣಿಯ ಬೆಳಕಿಗೆ ಕೈಗಳನ್ನು ಅಡ್ಡ ಹಿಡಿದು ಒಂದಷ್ಟು ಪ್ರಾಣಿ ಪಕ್ಷಿಗಳ ನೆರಳಿನ ಚಿತ್ರಗಳನ್ನು ಮೂಡಿಸಿ ಆನಂದಿಸಿ ಮತ್ತೆ ಓದಿಗೆ ಮರಳಬೇಕಾಗಿತ್ತು. ಅದೇ ಒಂದು ಖುಷಿ, ಆಗಿನ ಕಾಲಕ್ಕೆ. ವಿದ್ಯುತ್ ಅಡಚಣೆ ಎಂದರೆ ಮನೆಯ ಮಂದಿಗೂ ಒಂದು ರೀತಿಯ ಬಿಡುವು ಸಿಕ್ಕಂತೆ. ಎಲ್ಲರೂ ಒಟ್ಟಿಗೆ ಕುಳಿತು ಮಾತನಾಡಲು ಅವಕಾಶವೂ ಸಿಕ್ಕಂತಾಗುತ್ತಿತ್ತು. ಕೆಲವು ಮನೆಗಳಲ್ಲಿ ಈ ಬಿಡುವು ಹಾಡು-ಹಸೆ ಇವುಗಳಿಗೂ ಮೀಸಲಿರುತಿತ್ತು.

೨. ಇನ್ನು ಎರಡನೆಯದಾಗಿ, ಕೊಟ್ಟ ಮನೆಗೆಲಸಗಳು ಮುಗಿದಿದ್ದು ಆತುರಾತುರವಾಗಿ ಓದಿ ಮುಗಿಸಬೇಕಾದದ್ದೇನೂ ಇಲ್ಲದಿದ್ದರೆ ಆಗ ಮನೆಯಿಂದ ಹೊರಬಂದು ಅಥವಾ ಮನೆಯ ತಾರಸಿಯ ಮೇಲೆ ಹೋಗಿ ಈ ಕತ್ತಲಿನ ಸಂದರ್ಭದಲ್ಲಿ ಆಗಸದ ತಾರೆ-ಗ್ರಹಗಳನ್ನು ನೋಡಿ, ಗುರುತಿಸಿ ಆನಂದಿಸುವ ಅವಕಾಶವಿರುತ್ತಿತ್ತು. ಈ ವಿದ್ಯುತ್ ಅಡಚಣೆ ಪ್ರತಿದಿನದ ವಿಷಯವಾಗಿದ್ದರಿಂದ ದಿನವೂ ಒಂದಷ್ಟು ಹೊತ್ತು ಆಗಸವನ್ನು ನೋಡಿ ಆ ತಾರೆ ನೆನ್ನೆ ಎಲ್ಲಿತ್ತು, ಇವತ್ತು ಎಲ್ಲಿಗೆ ಬಂದಿದೆ, ನಾಳೆ ಎಲ್ಲಿರಬಹುದು ಎಂದೆಲ್ಲಾ ಎಣಿಕೆ ಮಾಡವುದೂ ಒಂದು ಆಟ. ಗುರು-ಶುಕ್ರ-ಶನಿ-ಮಂಗಳ ಗ್ರಹಗಳು ಕಾಣುವಂತಿದ್ದರೆ ಅವುಗಳನ್ನು ಚಂದ್ರನಿಗೆ ಹೋಲಿಸಿ ದಿನದಿನಕ್ಕೂ ಹೇಗೆ ಸಾಗುತ್ತಿವೆ ಎಂಬುದನ್ನು ಕುತೂಹಲದಿಂದ ನೋಡುವುದೂ ನಡೆಯುತ್ತಿತ್ತು. ಎಂದಾದರೊಮ್ಮೆ ಆ ಕಡುಗತ್ತಲೆಯಲ್ಲಿ ಬಹಳ ಎತ್ತರದಲ್ಲಿ ಬೆಳಕನ್ನು ಮಿನುಗಿಸುತ್ತಾ ವಿಮಾನವೊಂದು ಹಾದು ಹೋಗುವುದನ್ನು ಕಂಡಾಗ ಅದಿನ್ನು ಕಾಣುವುದೇ ಇಲ್ಲ ಎಂಬಷ್ಟು ದೂರದವರೆಗೂ ಅದರ ಮಿನುಗನ್ನು ನೋಡುತ್ತಾ ನಿಂತದ್ದಿದೆ. ಇನ್ನು ಕೆಲವೊಮ್ಮೆ ಮಿಂಚು ಹುಳುಗಳು ಹಾರಿ ಹೋಗುವುದನ್ನು ಕಂಡು ಪುಳಕದಿಂದ ನಲಿದಾಡಿದ್ದಿದೆ. ಹಾಗೆಯೇ ಮನೆಯ ಹಿರಿಯರಿಗೂ ತಮ್ಮ ತಮ್ಮಲ್ಲೇ ಮಾತನಾಡಿಕೊಂಡು ಬೇಜಾರಾಗಿದ್ದರೆ ಹೊರಗೆ ಬಂದು ಜಗಲಿಯ ಮೇಲೆ ಕುಳಿತು ಪಕ್ಕದ, ಎದುರು ಮನೆಯವರೊಡನೆ ಕಷ್ಟ-ಸುಖ ಹಂಚಿಕೊಳ್ಳುವುದೂ ಸಾಮಾನ್ಯವಾಗಿತ್ತು. ಯಾವ ಕೃತಕ ಬೆಳಕಿಲ್ಲದ, ಬೇರೆ ಶಬ್ದವಿಲ್ಲದ, ಕೇವಲ ಬೆಳದಿಂಗಳ ಹರಹಿನಲ್ಲಿ ಮನೆಯವರೆಲ್ಲಾ ಮಾತನಾಡುತ್ತಾ ಕೂರುವುದು ಆಗಿನ ಅಲ್ಪತೃಪ್ತಿಯ ಮತ್ತು ನೆಮ್ಮದಿಯ ಬದುಕಿಗೆ ಹಿಡಿದ ಕನ್ನಡಿಯಂತಿರುತ್ತಿತ್ತು.

ಈಗಿನ ಪರಿಸ್ಥಿತಿಗೆ ಇದನ್ನು ಹೋಲಿಸಿ ನೋಡಿದರೆ ಇಂದಿನ ನಿರೀಕ್ಷಣೆಗಳೂ ಹೆಚ್ಚಾಗಿವೆ, ನಗರಗಳಲ್ಲಿ ನಮ್ಮ ಜೀವನ ಶೈಲಿಯೂ ಬದಲಾಗಿದೆ. ನಗರಗಳಲ್ಲಷ್ಟೇ ಅಲ್ಲ, ಈಗ ಸಣ್ಣ ಊರುಗಳಲ್ಲಿಯೂ, ಹಳ್ಳಿಗಳಲ್ಲಿಯೂ ಮೂಲಸೌಕರ್ಯಗಳು ಉತ್ತಮವಾಗುತ್ತಲೇ ಬಂದಿವೆ. ಹಾಗೆ ಆದಾಗ ನಮ್ಮ ಜೀವನವನ್ನು ತೀರಾ ಹೆಚ್ಚಾಗಿಯೇ ಯಾಂತ್ರೀಕರಿಸಿಕೊಂಡುಬಿಟ್ಟವೇನೋ ಎಂಬ ಯೋಚನೆಯಾದರೂ ಒಮ್ಮೊಮ್ಮೆ ಮನಸ್ಸಿನಲ್ಲಿ ಸುಳಿದಾಡದಿದ್ದರೆ ನಾವೆಲ್ಲೋ ಎಡವುತ್ತಿದ್ದೇವೆಂಬ ಭಾವನೆ ನನಗಾದರೂ ಬರುತ್ತದೆ.

ಡಿವಿಜಿಯವರು ಹಲವಾರು ದಶಕಗಳ ಹಿಂದೆಯೇ ತಮ್ಮ "ಋತ ಸತ್ಯ ಧರ್ಮ" ಕೃತಿಯಲ್ಲಿ ಹೇಳಿರುವಂತೆ ಜನರಿಗೆ ಈಗ "ಎಲ್ಲವೂ ಯಾಂತ್ರಿಕವಾಗಬೇಕು. ಗುಂಡಿ ಒತ್ತಿದರೆ ಸ್ವರ್ಗ, ಕೀಲು ತಿರುಗಿಸಿದರೆ ಮೋಕ್ಷ. ಕಾಲಸ್ಥಿತಿ ಹೀಗಿರುವಾಗ ಮೈಗೆ ನೀರು ಸೋಕಿಸಿ ಕಷ್ಟಪಡಿಸುವುದು ಅನಾಗರಿಕತೆ, ಅವಿಜ್ಞಾನ...". ಈ ಯಾಂತ್ರೀಕರಣ ನಮಗೆ ಕಷ್ಟಸಾಧ್ಯವಾದ ಕೆಲಸಗಳನ್ನು ಸುಲಭ ಮಾಡಿಕೊಟ್ಟು ಅಲ್ಲಿ ಉಳಿಸಿದ ಸಮಯವನ್ನು ಸೃಜನಶೀಲವಾಗಿ ಕಳೆಯುವತ್ತ ಸಹಾಯ ಮಾಡಬೇಕಾಗಿತ್ತು. ಆದರೆ ಇಲ್ಲಿ ಆಗುತ್ತಿರುವುದೇ ಬೇರೆ. "ಅಜ್ಜಿ ನೂತದ್ದೆಲ್ಲಾ ಅಜ್ಜನ ಉಡುದಾರಕ್ಕೆ" ಎಂಬ ಗಾದೆಯಂತೆ ಯಂತ್ರಗಳ ಮತ್ತು ಮನೆ ಬಾಗಿಲಿಗೆ ಬೇಕಾದ್ದನ್ನು ತಂದೊದಗಿಸುವ ಸೇವೆಗಳ ಸಹಾಯದಿಂದ ಉಳಿಸಿದ ಸಮಯವನ್ನೆಲ್ಲಾ ಹೆಚ್ಚಿನವರು ಉಪಯೋಗವಿಲ್ಲದ "ಈಗಿನ ಕಾಲದ ಚಟ"ಗಳಿಗೆ ಧಾರೆ ಎರೆಯುತ್ತಿರುವಂತಿದೆ. ಇದಕ್ಕೆ ನಾನೇನೂ ಹೊರತಾಗಿಲ್ಲ. ಆದರೆ ಇದನ್ನು ಒಮ್ಮೊಮ್ಮೆಯಾದರೂ ಮೆಲುಕು ಹಾಕುವ ಮನಸ್ಥಿತಿ ನಮ್ಮಲ್ಲಿದ್ದರೆ ಅದರಿಂದ ಹೊರಬರುವ ಸಾಧ್ಯತೆಯನ್ನು ಕಾಪಾಡಿಕೊಳ್ಳಬಹುದೇನೋ.



ಈಗಿನ ಕಾಲದ ಮನುಷ್ಯನ ಗಮನ ಕೇಂದ್ರೀಕರಿಸುವ ಅವಧಿ ಬಹಳವಾಗಿ ಕುಂಠಿತವಾಗಿದೆ ಎಂದು ಹಲವಾರು ಸಂಶೋಧನೆಗಳು ಪ್ರತಿಪಾದಿಸಿವೆ. ಇದಕ್ಕೆ ಸಂಶೋಧನೆಗಳೇ ಬೇಕಿಲ್ಲ. ನಮ್ಮನ್ನು ನಾವು ಅವಲೋಕಿಸಿಕೊಂಡರೆ ನಮಗೇ ಗೊತ್ತಾಗುತ್ತದೆ. ಉದಾಹರಣೆಗೆ ನಮ್ಮ ಮೊಬೈಲ್ ಫೋನ್‌ಗಳು ನಮ್ಮನ್ನು ತಮ್ಮ ಅಡಿಯಾಳಾಗಿ ಮಾಡಿಕೊಂಡುಬಿಟ್ಟಂತೆ ತೋರುತ್ತದೆ.

ಈಗಿನ ಕಾಲದಲ್ಲಿ ವಿದ್ಯುತ್ ಅಡಚಣೆ ಉಂಟಾದಾಗಲೂ ಇನ್ವರ್ಟರ್ ಸಹಾಯದಿಂದ ದೀಪಗಳು ಝಗಮಗಿಸುತ್ತಿರುತ್ತವೆ, ಜನರು ದೂರದರ್ಶನ ವೀಕ್ಷಣೆಯಲ್ಲಿ ಮುಂದುವರೆಯುತ್ತಾರೆ ಅಥವಾ ತಮ್ಮ ಮೊಬೈಲ್‌ನಲ್ಲಿ ಮಾಡಬಹುದಾದ ಹತ್ತಾರು ಕೆಲಸಗಳಲ್ಲಿ ಒಂದನ್ನು ಮುಂದುವರೆಸಿಕೊಂಡು ಹೋಗುತ್ತಾರೆ. ಇಪ್ಪತ್ನಾಲ್ಕು ಗಂಟೆಯೂ ಪ್ರಪಂಚಕ್ಕೆ "ಕನೆಕ್ಟ್" ಆಗಿರಬೇಕಾದ್ದು ಅನಿವಾರ್ಯತೆ ಎಂಬಂತೆ ವರ್ತಿಸುತ್ತೇವೆ. ಹೊರಗೆ ಬಂದರೆ ಈ ಮನೆಗಳೊಳಗಿನ ಬೆಳಕು, ನಗರದ ವಾಹನಗಳ ಬೆಳಕುಗಳಿಂದ ಉಂಟಾದ ಮಾಲಿನ್ಯದಿಂದ ಕತ್ತಲಿನಾಗಸದ ತಾರೆ - ಗ್ರಹಗಳೂ ಕಾಣವು. ಅವು ಕಂಡರೂ ಅವುಗಳನ್ನು ಗುರುತಿಸಿ ಸೃಷ್ಟಿಯ ಸೌಂದರ್ಯವನ್ನು ಕೆಲವು ನಿಮಿಷಗಳಷ್ಟಾದರೂ ಸವಿಯುವ ಕುತೂಹಲವಾಗಲೀ ಅಥವಾ ವ್ಯವಧಾನವಾಗಲೀ ಹೆಚ್ಚು ಜನರಲ್ಲಿ ಕಾಣುತ್ತಿಲ್ಲ. ಈಗಿನ ಮಕ್ಕಳನ್ನು ಬೆಳೆಸುವ ಪರಿಸರ ಅವರ ಸರ್ವತೋಮುಖ ಬೆಳವಣಿಗೆಗೆ ಸಹಾಯಕಾರಿಯಾಗುವಂತೆ ಅನ್ನಿಸುತ್ತಿಲ್ಲ. ಮಕ್ಕಳಿಗೆ ಹಾಗಿರಲಿ, ತಮ್ಮದೇ ಜೀವನದಲ್ಲಿ ಒಂದು ಕಾಲಕ್ಕೆ ಮಾಡಿ ಕೈ ಬಿಟ್ಟಿರುವ ಈ ರೀತಿಯ ಕೆಲಸಗಳನ್ನೂ ನೆನಪಿಗೆ ಸಹ ತಂದುಕೊಳ್ಳದಂತಹ ಪರಿಸ್ಥಿತಿಗೆ ದೊಡ್ಡವರಾದ ನಾವೂ ತಲುಪಿಬಿಟ್ಟಿದ್ದೇವೆ. ನಮ್ಮ ಯಾಂತ್ರಿಕ ಜೀವನದಿಂದ ದಿನಕ್ಕೊಂದಿಷ್ಟೆಂದು ಹೊತ್ತು ದೂರವಿದ್ದು ನೋಡಿ ಈ ಪರಿಸ್ಥಿತಿಯನ್ನು ಸುಧಾರಿಸಬಹುದೇನೋ? ನಾನಂತೂ ಈ ಪ್ರಯತ್ನಕ್ಕೆ ಕೈ ಹಾಕುವ ನಿರ್ಧಾರ ಮಾಡಿದ್ದೇನೆ. ನೋಡೋಣ, ಅದರ ಪರಿಣಾಮ ಏನಾಗುತ್ತದೆಂದು...

# Quiz Time 7: Current Affairs Quiz

- Shivaprasad

(Answers on page 27)

1. Which state in India is the first to declare Internet as a fundamental right of the citizen?
   a. Kerala
   b. Delhi
   c. Maharashtra
   d. Gujarat
2. Who among these Indian was recently given the 'United Nations Military Gender Advocate of the Year' Award 2020'?
   a. Major Laxmi Swanth
   b. Major Deepa Kaur
   c. Major Suman Gawani
   d. Major Aarathi Bhat
3. Which three-time Olympic gold medal-winning hockey legend passed away recently?
   a. Baljit Saini
   b. Balbir Singh
   c. Ranjit Singh
   d. Khushwant Singh
4. Which of the following state in India has recently launched 'Everybody will get employment' scheme?
   a. Kerala
   b. Madhya Pradesh
   c. Maharashtra
   d. Gujarat

5. International Day for Biological Diversity (IDB) is observed every year on:
   a. 12th May
   b. 15th May
   c. 20th May
   d. 22nd May
6. Who among the following is elected as the Chairman of the World Health Organisation's (WHO) Executive Board?
   a. Mr Rajnath Singh
   b. Ms Nirmala Sitharaman
   c. Dr Harsh Vardhan
   d. Mr Anurag Thakur
7. What is the name of the super cyclone that affected the states of West Bengal and Odisha recently?
   a. Bhanu
   b. Greeshma
   c. Amphan
   d. Cyra
8. Under Atma Nirbhar Bharat package announced recently, the maximum permissible Foreign Direct Investment (FDI) in defense sector is:
   a. 49%
   b. 74%
   c. 75%
   d. 51%
9. India’s rank in the recently announced ‘Global Energy Transition Index’ by the World Economic Forum (WEF) is:
   a. 61
   b. 35
   c. 74
   d. 104
10. Which city recently witnessed Styrene gas leakage in a chemical plant?
   a. Chennai
   b. Vijayawada
   c. Visakhapatnam
   d. Guntur

**Do you want to contribute articles to the upcoming editions of Jñana Loka, the Multi Language Monthly?**

**You can share your articles (handwritten or otherwise), with us. You can write and share articles in any of the Indian languages or English.**

**Send your articles to:**
**jnanaloka.mag@gmail.com**

**Editors hold the final rights of publishing any article in the Jnana Loka magazine.**



Answers to Quiz Time 6:

| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| a | c | b | b | d | c | c | b | c | c |

Here are your badges based on how you performed…

Scores of 9 - 10: Champion!

Scores of 4 - 5: Curious

Scores of 6 - 8: Challenger

Scores of < 3: Can do better!

# ಜ್ಞಾನ  ಲೋಕ



**Jñana Loka Multi Language Monthly**
**May 2020**
**Published in e-Version only**

**Total Pages: 30 (including cover pages and contents)**

**Publishers**
**Venkateshprasanna H. M.**
**( hmvpstart@gmail.com ) / ( Twitter: @hmvprasanna )**
**&**
**Shivaprasad K.**
**( ksp20001@gmail.com )**

## Send your feedback to:
## jnanaloka.mag@gmail.com

- Articles and art published are proprietary creation of the authors.
- Images in the articles are by the authors themselves or are those available on public domain